# ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯ ಕಾರ್ಯಾನುಷ್ಠಾನ: ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಅಧ್ಯಯನ

ಅರ್ಥಶಾಸ್ತ್ರದಲ್ಲಿ ಎಂ.ಫಿಲ್. ಪದವಿಯ ಆಂಶಿಕ ಅವಶ್ಯಕತೆಗಾಗಿ ಕನ್ನಡ
ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಪ್ರೌಢ ಪ್ರಬಂಧ

ಸಂಶೋಧಕರು
**ಹೆಚ್. ಗುರುಬಸವರಾಜ**

ಮಾರ್ಗದರ್ಶಕರು
**ಟಿ.ಆರ್. ಚಂದ್ರಶೇಖರ**




ಅಭಿವೃದ್ಧಿ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
**ಕನ್ನಡ ವಿಶ್ವವಿದ್ಯಾಲಯ, ಹಂಪಿ**
ವಿದ್ಯಾರಣ್ಯ

ಸೆಪ್ಟೆಂಬರ್-೧೯೯೭

# ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯ ಕಾರ್ಯಾನುಷ್ಠಾನ: ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಅಧ್ಯಯನ

ಅರ್ಥಶಾಸ್ತ್ರದಲ್ಲಿ ಎಂ.ಫಿಲ್. ಪದವಿಯ ಆಂಶಿಕ ಅವಶ್ಯಕತೆಗಾಗಿ ಕನ್ನಡ
ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಪ್ರೌಢ ಪ್ರಬಂಧ

ಕನ್ನಡ ವಿಶ್ವವಿದ್ಯಾಲಯ, ಹಂಪಿ,
ಗ್ರಂಥಾಲಯ.

ಸಂಶೋಧಕರು
**ಹೆಚ್. ಗುರುಬಸವರಾಜ**

ಮಾರ್ಗದರ್ಶಕರು
**ಟಿ.ಆರ್. ಚಂದ್ರಶೇಖರ**

ಅಭಿವೃದ್ಧಿ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
**ಕನ್ನಡ ವಿಶ್ವವಿದ್ಯಾಲಯ, ಹಂಪಿ**
ವಿದ್ಯಾರಣ್ಯ

ಸೆಪ್ಟೆಂಬರ್-೧೯೯೭


AKSHARA GRANTHALAYA
ACC.NO. 042162

# ಸಂಶೋಧಕರ ಪ್ರಮಾಣ ಪತ್ರ

'ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯ ಕಾರ್ಯಾನುಷ್ಠಾನ : ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಅಧ್ಯಯನ'ಎಂಬ ಶೀರ್ಷಿಕೆಯ ಈ ಪ್ರೌಢ ಪ್ರಬಂಧವನ್ನು ಅರ್ಥಶಾಸ್ತ್ರದಲ್ಲಿ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಒಪ್ಪಿಸಲು ಟಿ.ಆರ್ ಚಂದ್ರಶೇಖರ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಈ ಅಧ್ಯಯನದ ವಿಷಯವನ್ನು ಇದುವರೆಗೆ ಯಾವ ಪದವಿಗೂ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ: ೨೦-೦೯- ೧೯೯೭

ಹೆಚ್ .ಗುರುಬಸವರಾಜ
ಸಂಶೋಧನಾ ವಿದ್ಯಾರ್ಥಿ
ಅಭಿವೃದ್ಧಿ ಅಧ್ಯಯನ ವಿಭಾಗ ,
ಕನ್ನಡ ವಿಶ್ವವಿದ್ಯಾಲಯ,ಹಂಪಿ

ಗ್ರಂಥಾಲಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ.

# ಮಾರ್ಗದರ್ಶಕರ ದೃಢೀಕರಣ ಪತ್ರ

ಶ್ರೀ ಹೆಚ್ .ಗುರುಬಸವರಾಜ ಅವರು 'ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯ ಕಾರ್ಯಾನುಷ್ಠಾನ :ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಅಧ್ಯಯನ' ಎಂಬ ಶೀರ್ಷಿಕೆಯ ಈ ಪ್ರಬಂಧವನ್ನು ೧೯೯೬-೯೭ರ ಶೈಕ್ಷಣಿಕ ವರ್ಷದ ಅರ್ಥಶಾಸ್ತ್ರದ ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಅರ್ಪಿಸಲೆಂದು ನನ್ನ ಮಾರ್ಗದರ್ಶನದಲ್ಲಿ ಸಿದ್ದಪಡಿಸಿದ್ದಾರೆ. ಈ ಪ್ರೌಢ ಪ್ರಬಂಧದ ವಿಷಯವನ್ನು ಇದುವರೆಗೆ ಯಾವ ಪದವಿಗೂ ಇವರು ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ :ವಿದ್ಯಾರಣ್ಯ

ದಿನಾಂಕ:೨೦-೦೯-೧೯೯೭

ಟಿ.ಆರ್. ಚಂದ್ರಶೇಖರ
ಪ್ರವಾಚಕರು
ಅಭಿವೃದ್ಧಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ,ಹಂಪಿ

## ಕೃತಜ್ಞತೆಗಳು

ಕನ್ನಡ ವಿಶ್ವವಿದ್ಯಾಲಯದಲ್ಲಿ ಎಂ.ಫಿಲ್ ಅಧ್ಯಯನಕ್ಕೆ ಅವಕಾಶ ಕಲ್ಪಿಸಿಕೊಟ್ಟ ಮಾನ್ಯ ಕುಲಪತಿಗಳಾದ ಡಾ.ಚಂದ್ರಶೇಖರ ಕಂಬಾರ, ಮಾನ್ಯ ಕುಲಸಚಿವ ಅವರುಗಳಿಗೆ,

ಅಧ್ಯಯನ ಕ್ರಮವನ್ನು ಬೋಧಿಸಿ ಪ್ರೀತಿಯಿಂದ ಮಾರ್ಗದರ್ಶನ ನೀಡಿದ ಟಿ.ಆರ್.ಚಂದ್ರಶೇಖರ ಅವರಿಗೆ,

ಅಧ್ಯಯನದ ಅವಧಿಯಲ್ಲಿ ಎಲ್ಲಾ ರೀತಿಯ ಪ್ರೋತ್ಸಾಹ , ಸಲಹೆ , ಸೂಚನೆ ನೀಡಿದ ಡಾ.ಬಿ.ಶೇಷಾದ್ರಿ, ಡಾ.ಶೌಕತ್ ಅಝಿಮ್ ಹಾಗೂ ಅಧ್ಯಾಪಕ ವರ್ಗಕ್ಕೆ ,

ಅಧ್ಯಯನದ ಪೂರಕ ವಿಷಯಗಳನ್ನು ಬೋಧಿಸಿದ ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ, ಡಾ.ಸತ್ಯನಾಥ್, ಡಾ.ಶಿವರಾಂ ಪಡಿಕ್ಕಲ್, ಡಾ.ಮೈತ್ರಿ ಕಾಮಣ್ಣ, ಡಾ.ಮಂಜುನಾಥ ಬೇವಿನಕಟ್ಟಿ ಅವರುಗಳಿಗೆ,

ವಿವಿಧ ರೀತಿಯಲ್ಲಿ ಸಹಕರಿಸಿದ 'ಅಕ್ಷರ'ದ ಸಿಬ್ಬಂದಿಗೆ , ಅಂಕಿ ಅಂಶಗಳನ್ನುನೀಡಿದ ಹಗರಿಬೊಮ್ಮನಹಳ್ಳಿ ತಾಲ್ಲೂಕ ಪಂಚಾಯತಿಯ ಆಡಳಿತ ಮಂಡಳಿ ಹಾಗೂ ಸಿಬ್ಬಂದಿಗೆ, ಕ್ಷೇತ್ರಕಾರ್ಯದಲ್ಲಿ ಜೊತೆಗಿದ್ದ ಮಿತ್ರರಾದ ಚಂದ್ರು, ಮಂಜು, ಕೊಟ್ರೇಶ್ ಹಾಗೂ ಇನ್ನಿತರ ಮಿತ್ರರಿಗೆ,

ಎಲ್ಲಾ ರೀತಿಯಿಂದಲೂ ಸಹಕರಿಸಿದ ಕೃಷ್ಣ, ಕುಮಾರ್, ಎರಿಸ್ವಾಮಿ, ಅಶೋಕ, ಹನುಮರೆಡ್ಡಿ, ದುರುಗಪ್ಪ ಮತ್ತುಮರಬ್ಬಿಹಾಳ್ ಮಿತ್ರರಿಗೆ ಹಾಗೂ ಎಲ್ಲಾ ಎಂ.ಫಿಲ್ ಮತ್ತು ಪಿ.ಹೆಚ್‌ಡಿ. ವಿದ್ಯಾರ್ಥಿ ಮಿತ್ರರಿಗೆ,

ನನ್ನ ಶ್ರೇಯಸ್ಸನ್ನೇ ಬಯಸುವ ತಂದೆ - ತಾಯಿ, ಅಣ್ಣ - ಅತ್ತಿಗೆ, ಅಕ್ಕ- ಭಾವಂದಿರಿಗೆ ಹಾಗೂ ಬಂಧು ಮಿತ್ರರಿಗೆ,

ಅಂದವಾಗಿ ಅಕ್ಷರ ಜೋಡಣೆ ಮಾಡಿಕೊಟ್ಟ 'ಸ್ಪೂರ್ತಿ ಕಂಪ್ಯೂಟರ್ಸ್' ಎಲ್ಲಾ ಸಿಬ್ಬಂದಿಯವರಿಗೂ, ತುಂಬು ಹೃದಯದ ಕೃತಜ್ಞತೆಗಳು.

ಹೆಚ್ .ಗುರುಬಸವರಾಜ

# ಪರಿವಿಡಿ

# ಅಧ್ಯಾಯ:೧

## ೧.೧ ಪ್ರವೇಶ:

ನಮ್ಮ ಸಮಾಜದ ಸಂದರ್ಭದಲ್ಲಿ ಬಡತನವು ತೀವ್ರವಾಗಿದೆ ಎಂಬುದರ ಬಗ್ಗೆ ಅನುಮಾನ ಸಾಧ್ಯವಿಲ್ಲ. ೧೯೭೭-೭೮ರಲ್ಲಿ ಎನ್ .ಎಸ್ .ಎಸ್ .ವರದಿಯ ಪ್ರಕಾರ ಬಡತನ ರೇಖೆಯ ಕೆಳಗಿರುವವರ ಪ್ರಮಾಣವು ಶೇ.೫೧.೩ ರಷ್ಟು ಎಂಬುದು ತಿಳಿದುಬಂದಿದೆ(Pandey & Jalal:೧೯೯೧). ಏಳನೇ ಪಂಚವಾರ್ಷಿಕ ಯೋಜನೆಯ ಸಮೀಕ್ಷೆಯ ಪ್ರಕಾರ ಬಡತನದ ಪ್ರಮಾಣ ಶೇ.೨೫.೮.ರಷ್ಟಿತ್ತು (ಕುಮಾರ್ :೧೯೯೬). ೧೯೯೩-೯೪ರಲ್ಲಿ 'ಲಕಡವಾಲ'ಸಮಿತಿ ಮಾಡಿದ ಅಂದಾಜಿನ ಪ್ರಕಾರ ಬಡತನದ ಪ್ರಮಾಣವು ಶೇ.೩೯ ಎನ್ನಲಾಗಿದೆ. ಬಡತನ ತೀವ್ರವಾಗಿರುವುದು ವಿಶೇಷವೇನಲ್ಲ. ಆದರೆ ಅದರ ನಿವಾರಣೆಗಾಗಿ ಬೃಹತ್ ಪ್ರಯತ್ನಗಳು ನಡೆಯುತ್ತಿದ್ದರೂ ಸಹಾ ಅದು ಮುಂದುವರಿಯುತ್ತಿರುವುದು ಮಾತ್ರ ವಿಶೇಷವಾಗಿ ಕಂಡುಬರುತ್ತಿದೆ. ೧೯೯೭ರ ಮಾನವ ಅಭಿವೃದ್ಧಿ ವರದಿ ಪ್ರಕಾರ ಭಾರತದಲ್ಲಿ ತೀವ್ರ ದಾರಿದ್ರ್ಯದಿಂದ ನರಳುತ್ತಿರುವವರ ಪ್ರಮಾಣ ಶೇ.೩೬.೫ (ಮಾನವ ಅಭಿವೃದ್ಧಿ ವರದಿ ೧೯೯೭).

ಬಡ ಕುಟುಂಬಗಳಲ್ಲಿ ಸಿಂಹಪಾಲು ಕೃಷಿ ಕಾರ್ಮಿಕರಾಗಿದ್ದಾರೆ. ಕರ್ನಾಟಕವನ್ನು ಸೇರಿಸಿಕೊಂಡು ಭಾರತದ ಅನೇಕ ರಾಜ್ಯಗಳಲ್ಲಿನ ಬಡತನ ರೇಖೆ ಕೆಳಗಿನ ಕುಟುಂಬಗಳಲ್ಲಿ ಅರ್ಧದಷ್ಟು ಕೃಷಿ ಕಾರ್ಮಿಕರೇ ಇದ್ದಾರೆ. ಪ್ರಸ್ತುತ ಅಧ್ಯಯನ ಕ್ಷೇತ್ರವಾದ ಹಗರಿಬೊಮ್ಮನಹಳ್ಳಿ ತಾಲ್ಲೂಕಿನಲ್ಲಿ ಒಟ್ಟು ಶ್ರಮ ಶಕ್ತಿಯಲ್ಲಿ ಅತಿ ಹೆಚ್ಚು ಅಂದರೆ ಶೇ.೪೪.೨೧ ರಷ್ಟು ಕೃಷಿ ಕಾರ್ಮಿಕರಿದ್ದಾರೆ (ಬಳ್ಳಾರಿ ಜಿಲ್ಲೆ ಜನಗಣತಿ ಕೈಪಿಡಿ,೧೯೯೧). ಈ ತಾಲ್ಲೂಕಿನಲ್ಲಿ ಜನಸಂಖ್ಯೆ ಬೆಳವಣಿಗೆಯ ಪ್ರಮಾಣ ೧೯೯೧ರ ಜನಗಣತಿ ಪ್ರಕಾರ ಶೇ.೩೬. ಹೆಚ್ಚುತ್ತಿರುವ ಜನಸಂಖ್ಯೆಯು ಅನಿವಾರ್ಯವಾಗಿ ಕೃಷಿಯಾಧರಿತ ಉದ್ಯೋಗಗಳನ್ನು ಅವಲಂಬಿಸಿದ್ದಾರೆ. ಏಕೆಂದರೆ ಸದರಿ ತಾಲ್ಲೂಕಿನಲ್ಲಿ ಕೃಷಿಯೇತರ ಚಟುವಟಿಕೆಗಳು ವ್ಯಾಪಕವಾಗಿ ಬೆಳೆದಿಲ್ಲ. ಇದರಿಂದಾಗಿ ಕೃಷಿಯ ಮೇಲೆ ಜನರ ಒತ್ತಡ ಅಧಿಕವಾಗಿದೆ. ಇದರ ಫಲವಾಗಿ ಅತಿ ಹೆಚ್ಚು ಜನ ಬಡತನ ರೇಖೆಯ ಕೆಳಗಡೆ ಜೀವಿಸುತ್ತಿದ್ದಾರೆ.

ನಮ್ಮ ಗ್ರಾಮಾಂತರ ಪ್ರದೇಶದಲ್ಲಿ ಗ್ರಾಮಗಳು ಏಕರೂಪ ರಚನೆ (ಇದರ ಕುರಿತಾದ ವಿವರಣೆಯನ್ನು ಅಧ್ಯಾಯಗಳಲ್ಲಿ ನೀಡಲಾಗಿದೆ) ಹೊಂದಿರುವುದನ್ನು ಕಾಣುತ್ತೇವೆ. ಏಕರೂಪ ಗ್ರಾಮ ರಚನೆಯಲ್ಲಿ ವ್ಯವಸಾಯ ಪ್ರಧಾನವಾದ ಉದ್ಯೋಗವಾಗಿರುತ್ತದೆ. ಆದರೆ ಈ ಕೃಷಿ ಕ್ಷೇತ್ರದಲ್ಲಿ ಸದ್ಯ ಇರುವ ಜನಸಂಖ್ಯೆಯನ್ನು ಮತ್ತು ಬೆಳೆಯುತ್ತಿರುವ ಜನಸಂಖ್ಯೆಯನ್ನು ಜೀರ್ಣಿಸಿಕೊಳ್ಳಬಲ್ಲ ಧಾರಣಶಕ್ತಿ ಇಲ್ಲವಾದ್ದರಿಂದ ಬಡವರು

ಬಡವರಾಗಿಯೇ ಉಳಿಯುತ್ತಿದ್ದಾರೆ. ಈ ರೀತಿಯಾಗಿ ಕೃಷಿ ಕ್ಷೇತ್ರದಲ್ಲಿ ಅವಶ್ಯಕತಗಿಂತ ಹೆಚ್ಚು ಇರುವ ಜನಸಂಖ್ಯೆಯನ್ನು ವಿವಿಧ ಚಟುವಟಿಕೆ(ಕ್ಷೇತ್ರ)ಗಳಲ್ಲಿ ತೊಡಗಿಸಿ ಬಹುರೂಪ ಗ್ರಾಮ ರಚನೆ ಮಾಡುವುದು ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯ ಹಿಂದಿರುವ ಬಹುಮುಖ್ಯ ಗುರಿಯಾಗಿದೆ. ಸಾಂಪ್ರದಾಯಿಕವಾಗಿ ಒಂದು ಅರ್ಥಿಕತೆಯಲ್ಲಿ ಜನಸಂಖ್ಯೆಯ ವೃತ್ತಿವಾರು ರಚನೆಯಲ್ಲಾಗುವ ಬದಲಾವಣೆಯನ್ನೇ ಅಭಿವೃದ್ಧಿ ಎಂದು ನಿರ್ವಚಿಸಲಾಗಿದೆ.

ಇಂದಿನವರೆಗೂ ಗ್ರಾಮೀಣ ಅಭಿವೃದ್ಧಿ ಎಂದರೆ ಕೃಷಿ ಅಭಿವೃದ್ಧಿ ಎಂದೇ ಪರಿಗಣಿಸಲಾಗುತ್ತಿದೆ. ಕೃಷಿ ಅಭಿವೃದ್ಧಿಯೂ ಅವಶ್ಯಕ. ಆದರೆ ಕೃಷಿ ಅಭಿವೃದ್ಧಿಯಾದಲ್ಲಿ ಅದು ಏಕೈಕ ಕ್ಷೇತ್ರದ ಅಭಿವೃದ್ಧಿಯಾದೀತೇ ವಿನಾ ಗ್ರಾಮೀಣ ಅಭಿವೃದ್ಧಿ ಎನಿಸಿಕೊಳ್ಳುವುದಿಲ್ಲ. ಗ್ರಾಮೀಣ ಪ್ರದೇಶಗಳಲ್ಲಿ ಕೃಷಿಯಾಧರಿತ ಚಟುವಟಿಕೆಗಳಲ್ಲಿ ತೊಡಗಿರುವವರ ಸಂಖ್ಯೆ ಹೆಚ್ಚು ಕಂಡುಬರುತ್ತಿದೆ. ಹಾಗಾಗಿ ಕೃಷಿ ಅಭಿವೃದ್ಧಿಯಿಂದ ಹೊರಚಿಮ್ಮಿದ ಪರಿಣಾಮ ಮಾತ್ರ ಎಲ್ಲಾ ಜನಗಳಿಗೆ ತಲುಪುತ್ತಿಲ್ಲ. ಏಕರೂಪಿಯಾದ ಅಭಿವೃದ್ಧಿಯನ್ನು ಬಹುರೂಪಿಯಾಗಿ ಮಾಡಬೇಕಾದರೆ ವಿವಿಧ ಕ್ಷೇತ್ರಗಳ ಸಮನ್ವಯ ರೂಪದ ಅಭಿವೃದ್ಧಿಯಾಗಬೇಕು. ಕೃಷಿ ಅಭಿವೃದ್ಧಿಯ ಜೊತೆಗೆ ಗ್ರಾಮೀಣ ಕಸಬುಗಳು, ಗುಡಿ ಕೈಗಾರಿಕೆಗಳು, ಹೈನುಗಾರಿಕೆ, ಕುರಿಸಾಕಾಣಿಕೆ ಮುಂತಾದ ಆರ್ಥಿಕ ಚಟುವಟಿಕೆಗಳ ಜೊತೆಗೆ ಸಾಮಾಜಿಕ ಮೂಲಭೂತ ಸೌಲಭ್ಯಗಳು ಸೇರಿರಬೇಕು.ಕಳೆದ ನಾಲ್ಕು-ಐದು ದಶಕಗಳಿಂದ ನಡೆದ ಸಮಗ್ರವಾದ ಅಧ್ಯಯನದ ವಿಧಾನಗಳು ಇಂದು ತಮ್ಮ ಪ್ರಸ್ತುತತೆಯನ್ನು ಕಳೆದುಕೊಳ್ಳುತ್ತಿವೆ. ದೇಶದಲ್ಲಿ ವೈವಿಧ್ಯತೆಗಳಿಂದ ಕೂಡಿದ ಪ್ರದೇಶ ಹಾಗೂ ಜನರಿರುವುದರಿಂದ ರಾಷ್ಟ್ರ ಹಾಗೂ ರಾಜ್ಯ ಮಟ್ಟದಲ್ಲಿ ನಡೆಯುವ ಅಧ್ಯಯನಗಳು ಎಲ್ಲಾ ಪ್ರದೇಶಗಳಿಗೆ ಎಲ್ಲಾ ಜನರಿಗೂ ಅನ್ವಯವಾಗದೇ ಇರಬಹುದು. ಈ ಹಿನ್ನೆಲೆಯಲ್ಲಿ ತಳಮಟ್ಟದಲ್ಲಿನ ಅಧ್ಯಯನಗಳು ಹೆಚ್ಚು ಸೂಕ್ತವಾದವೆಂದು ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯ ಕಾರ್ಯಾನುಷ್ಠಾನದ ಸ್ವರೂಪವನ್ನು ಗುರುತಿಸಲು ಇಲ್ಲಿ ನಾವು ಪ್ರಯತ್ನಿಸಿದ್ದೇವೆ.

ಕಳೆದ ದಶಕಗಳಲ್ಲಿ ಸಮಗ್ರ ಮಟ್ಟದಲ್ಲಿನ ಅಧ್ಯಯನಗಳು ಎಲ್ಲಾ ಪ್ರದೇಶಗಳಿಗೂ ಏಕರೂಪ ವಿಧಾನವನ್ನು ಅನ್ವಯಿಸಬಹುದು ಎಂಬ ಸೈದ್ಧಾಂತಿಕ ನೆಲೆಯನ್ನು ಇಟ್ಟುಕೊಂಡಿದ್ದವು. ಅದರಂತೆಯೇ ಪಂಚವಾರ್ಷಿಕ ಯೋಜನೆಗಳ ಮೂಲಕ ಹಲವಾರು ಯೋಜನೆಗಳನ್ನು ಪರಿಚಯಿಸುತ್ತಲೇ ಬಂದವು(ಲಕ್ಷ್ಮೀದೇವಿ:೧೯೯೬). ಅವು ನಿರೀಕ್ಷಿಸಿದ ಗುರಿಯನ್ನು ತಲುಪಲಿಲ್ಲ. ಏಕೆಂದರೆ ಇದರಿಂದ ಏಕರೂಪಿಯಾದ ಕೃಷಿ ಅಭಿವೃದ್ಧಿಯಾಯಿತೇ

ಹೊರತು ಗ್ರಾಮೀಣ ಅಭಿವೃದ್ಧಿಯಾಗಲಿಲ್ಲ. ಇದನ್ನು ಮನಗಂಡ ಸರ್ಕಾರ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆ ಎಂಬ ಹೊಸ ಯೋಜನೆಯನ್ನು ಪ್ರಾರಂಭಿಸಲು ಯೋಚಿಸಿತು.

**೧.೨.ಅಧ್ಯಯನ ವಿಷಯದ ನಿರೂಪಣೆ**

ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆ ಜಾರಿಗೆ ಬಂದು ಅನೇಕ ದಶಕಗಳಾಗಿವೆ. ಈ ಯೋಜನೆಯ ಯಶಸ್ಸು ಹಾಗೂ ವೈಫಲ್ಯಗಳನ್ನು ಕುರಿತಂತೆ ದೇಶಾದ್ಯಂತ ನೂರಾರು ಅಧ್ಯಯನಗಳು ನಡೆದಿವೆ. ಈ ಯೋಜನೆಯನ್ನು ಬ್ಯಾಂಕು ಸಾಲ ಸಹಿತ-ಉದ್ಯೋಗ ಸಾಂದ್ರ ಬಡತನ ನಿವರಣಾ ಕಾರ್ಯಕ್ರಮವೆಂದು ಹೇಳಬಹುದು. ೧೯೭೦ರ ದಶಕದ ಮಧ್ಯಭಾಗದವರೆಗೂ ಬಡತನ ಹಸಿವು-ಮುಂತಾದ ಸಮಸ್ಯೆಗಳನ್ನು ವರಮಾನ-ಆಹಾರೋತ್ಪನ್ನಗಳೇ ನಿವಾರಿಸಬಲ್ಲವು ಎಂದು ಬಲವಾಗಿ ನಂಬಲಾಗಿತ್ತು. ಆದರೆ ಆ ನಂಬಿಕೆ ಹುಸಿಯಾಯಿತು. ಬಡತನ-ಹಸಿವುಗಳಿಗೆ ಸಂಬಂಧಿಸಿದ ಹಾಹಾಕಾರ ಎಷ್ಟು ಸಂಕೀರ್ಣವಾಗಿತ್ತು ಹಾಗೂ ಬೃಹತ್ತಾಗಿತ್ತೆಂದರೆ ಅದನ್ನು ನೇರವಾಗಿ ಎದುರಿಸುವುದು ಅನಿವಾರ್ಯ ಅಗತ್ಯವಾಗಿತ್ತು. ಅಪ್ರತ್ಯಕ್ಷವಾಗಿ ಹಾಗೂ ಆನುಷಂಗಿಕವಾಗಿ ಬಡತನ-ಹಸಿವುಗಳನ್ನು ನಿವಾರಿಸಬಹುದು ಎಂಬ ನಂಬಿಕೆ ಸುಳ್ಳಾಗಿಬಿಟ್ಟಿತು. ಇದರ ಪರಿಣಾಮವಾಗಿ ಬಡತನವನ್ನು ನೇರವಾಗಿ ಎದುರಿಸಲು ಸರ್ಕಾರ ಸಿದ್ಧವಾಯಿತು. ಇದರ ಫಲವಾಗಿ ಆರನೇ ಪಂಚವಾರ್ಷಿಕ ಯೋಜನೆಯಲ್ಲಿ ಅನೇಕ ಬಡತನ ನಿವಾರಣಾ-ಆಯ್ದು ಗುಂಪು ಆಧರಿತ ಕಾರ್ಯಕ್ರಮಗಳು ಜಾರಿಗೆ ಬಂದವು. ಹೀಗೆ ಜಾರಿಗೊಂಡ ಕಾರ್ಯಕ್ರಮಗಳಲ್ಲಿ ಬೃಹತ್ತಾದುದು ಹಾಗೂ ಮಹತ್ವವಾದುದು ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆ.

ಕ್ಷೇತ್ರ ಹಾಗೂ ಗ್ರಾಮಗಳ ಮಟ್ಟದಲ್ಲಿ ಬಡತನದ ರೇಖೆ ಕೆಳಗೆ ಇರುವ ಕುಟುಂಬಗಳನ್ನು ಗುರುತಿಸುವುದು ಹಾಗೂ ಹಾಗೆ ಗುರುತಿಸಿದ ಕುಟುಂಬಗಳಿಗೆ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯಡಿಯಲ್ಲಿ ಹಣಕಾಸು ನೆರವು ನೀಡುವುದು ಈ ಯೋಜನೆಯ ಮುಖ್ಯ ಲಕ್ಷಣವಾಗಿದೆ. ನೂರಾರು ಬಗೆಯ ಚಟುವಟಿಕೆಗಳಿಗೆ ಈ ಯೋಜನೆಯಡಿಯಲ್ಲಿ ನೆರವು ನೀಡಬಹುದಾಗಿದೆ. ನಮ್ಮ ಗ್ರಾಮೀಣ ಪ್ರದೇಶವನ್ನು 'ಏಕರೂಪ ರಚನೆ' -ಎಂದು ವಿವರಿಸಬಹುದು. ಗ್ರಾಮೀಣ ಪ್ರದೇಶಗಳಲ್ಲಿ ಬದುಕು ಕೃಷಿಯನ್ನು ಸುತ್ತುವರಿದಿರುತ್ತದೆ. ಸಾಮಾಜಿಕವಾಗಿ ಗ್ರಾಮಗಳು ಬಹುರೂಪಿಯಾಗಿರಬಹುದು. ಆದರೆ ವೃತ್ತಿ ಸ್ವರೂಪದಲ್ಲಿ ಉತ್ಪಾದನಾ ಸ್ವರೂಪದಲ್ಲಿ. ಅವು ಏಕರೂಪಿ ರಚನೆಗಳಾಗಿವೆ.

ಎಲ್ಲಿಯವರೆಗೆ ಇವು ಏಕರೂಪ ರಚನೆಗಳಾಗಿರುತ್ತವೆಯೋ ಅಲ್ಲಿಯವರೆಗೆ ಗ್ರಾಮಗಳಲ್ಲಿ ಬಡತನದ ನಿವಾರಣೆ ಕಷ್ಟಸಾಧ್ಯ ಎನ್ನಲಾಗಿದೆ. ಈ ವಿಚಾರಗಳು ವಿ.ಎಮ್ .ರಾವ್ ಅವರು ಕರ್ನಾಟಕದಲ್ಲಿ ಸಮಗ್ರ

ಗ್ರಾಮೀಣ ಅಭಿವೃದ್ಧಿ ಯೋಜನೆಗಳ ಬಗ್ಗೆ ನಡೆಸಿರುವ ಅನೇಕ ಅಧ್ಯಯನಗಳಲ್ಲಿ ಕಂಡುಬಂದಿದೆ. ಆರ್ಥಿಕವಾಗಿ ಗ್ರಾಮೀಣ ಪ್ರದೇಶಗಳು ಬಹುರೂಪಿ ರಚನೆಗಳಾಗಿ ರೂಪುಗೊಳ್ಳಬೇಕು. ಈ ದಿಶೆಯಲ್ಲಿ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯ ಪಾತ್ರವೇನು? ಈ ಯೋಜನೆಯು ಗ್ರಾಮೀಣ ಪ್ರದೇಶದಲ್ಲಿ ಕೃಷಿಯೇತರ ಚಟುವಟಿಕೆಗಳನ್ನು ಬೆಳೆಸುವುದರಲ್ಲಿ ಯಶಸ್ವಿಯಾಗಿದೆಯೇ? ಈ ಬಗೆಯ ಅಧ್ಯಯನಗಳನ್ನು ಕೈಗೊಳ್ಳುವ ಅವಶ್ಯಕತೆ ಇದೆ.

ಬಡತನ ನಿವಾರಣಾ ಕಾರ್ಯಕ್ರಮಗಳ ಸ್ವರೂಪ ಹಾಗೂ ಕಾರ್ಯಾನುಷ್ಠಾನಗಳ ಬಗ್ಗೆ ನಡೆದ ಅಧ್ಯಯನಗಳ ಆಧಾರದ ಮೇಲೆ ವಿನೋದ್ ವ್ಯಾಸುಲು ಅವರು ಕಂಡುಕೊಂಡ ತಥ್ಯವೆಂದರೆ ಇವೆಲ್ಲವೂ ಕೇವಲ ಬಡತನವನ್ನು ಸಹನೀಯವನ್ನಾಗಿ ಮಾಡಬಲ್ಲ 'ಪರಿಹಾರಾತ್ಮಕ'ಕಾರ್ಯಕ್ರಮಗಳಾಗಿವೆ ಎಂಬುದಾಗಿದೆ. ತಕ್ಷಣದ ದಾರುಣತೆಗೆ ಒಂದು ಬಗೆಯ ಪರಿಹಾರವನ್ನು-ಶಮನವನ್ನು ಈ ಕಾರ್ಯಕ್ರಮಗಳು ಒದಗಿಸಬಲ್ಲವು. ಬಡತನದ ನಿವಾರಣೆಗೆ ಬೇಕಾದ ಸ್ವಯಂ ಪೋಷಿತ ಚಟುವಟಿಕೆಗಳು ಈ ಕಾರ್ಯಕ್ರಮದಡಿಯಲ್ಲಿ ರೂಪಿಸಲಾಗಿಲ್ಲ.

ಈ ಅಧ್ಯಯನವನ್ನು ಎಂ.ಫಿಲ್ ಪದವಿಗಾಗಿ ಕೈಗೊಳ್ಳಲಾಗಿದೆ. ಇಲ್ಲಿ ಸಮಯದ ಅಭಾವವಿರುವುದರಿಂದ ನಮ್ಮ ಅಧ್ಯಯನವನ್ನು ಅತ್ಯಂತ ಸೀಮಿತ ನೆಲೆಯಲ್ಲಿ ನಡೆಸಲಾಗಿದೆ. ಈ ಅಧ್ಯಯನಕ್ಕೆ ವಿನೂತನವಾದ ಅಧ್ಯಯನ ವಿಧಾನವನ್ನುಅಳವಡಿಸಿಕೊಳ್ಳಲಾಗಿದೆ.

**೧.೩ ಸಮಗ್ರ ಗ್ರಾಮೀಣ ಅಭಿವೃದ್ಧಿಯೋಜನೆ;ಒಂದು ಪಕ್ಷಿ ನೋಟ**

ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯು ಬ್ಯಾಂಕ್ ಸಾಲ ಸಹಿತ ಉದ್ಯೋಗ ಸಾಂದ್ರ ಬಡತನ ನಿವಾರಣಾ ಕಾರ್ಯ ಕ್ರಮವಾಗಿದೆ. ಗ್ರಾಮೀಣ ಪ್ರದೇಶದಲ್ಲಿ ಬಡ ಕುಟುಂಬಗಳು ಬಡತನ ರೇಖೆಯಿಂದ ಮೇಲೇಳಲು ಸಹಾಯಕವಾಗುವ ಬ್ಯಾಂಕ್ ಸಾಲ ಸಹಿತ ಉದ್ಯೋಗ ಒದಗಿಸುವ ಉದ್ದೇಶದಿಂದ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯನ್ನು ಪ್ರಾರಂಭಿಸಲಾಯಿತು. ಈ ಯೋಜನೆಯು ಕೆಳಗಿನ ಉದ್ದೇಶಗಳನ್ನು ಹೊಂದಿದೆ (ಸಿಂಗ್. ೧೯೯೫, ದೇವಿ. ೧೯೯೬)

೧) ಬಡತನ ರೇಖೆಯ ಕೆಳಗಿರುವವರ ಜೀವನವನ್ನು ಸುಧಾರಿಸುವುದು.

೨) ೧೫ ರಿಂದ ೫೯ ವಯೋಮಿತಿಯವರಿಗೆ ಪೂರ್ಣೋದ್ಯೋಗ ಒದಗಿಸಿ ಕೊಡುವುದು.

೩) ಆಸ್ತಿ ನಿರ್ಮಾಣ ಮಾಡಿ ಆಮೂಲಕ ಆದಾಯಗಳಿಸುವಂತೆ ಮಾಡುವುದು.

೪) ಕೃಷಿ ಸಂಬಂಧಿ ಕೈಗಾರಿಕಾ ಸಂಕೀರ್ಣಗಳನ್ನು ಸ್ಥಾಪನೆ ಮಾಡಿ ಜನರನ್ನು ಕೃಷಿಯೇತರ ಚಟುವಟಿಕೆಯಲ್ಲಿ ತೊಡಗಿಸುವುದು.

೫) ಸಮಾಜದಲ್ಲಿನ ಆರ್ಥಿಕ ಅಂತರವನ್ನು ಕಡಿಮೆ ಮಾಡುವುದು,ಬಡತನ ರೇಖೆ ಹಾಗೂ ಫಲಾನುಭವಿಗಳನ್ನು ಗುರುತಿಸುವುದು.

ಬಡತನದ ರೇಖೆಯನ್ನು ಕುಟುಂಬದ ವಾರ್ಷಿಕ ಆದಾಯದ ಮೇಲೆ ನಿರ್ಧರಿಸಲಾಗುವುದು. ಯಾವ ಕುಟುಂಬದ ಆದಾಯವು ವರ್ಷಕ್ಕೆ ೧೯೭೮-೭೯ ನೇ ವರ್ಷದ ಬೆಲೆಗಳ ಸೂಚ್ಯಂಕದ ಪ್ರಕಾರ ೩೬೦೦ ಹಾಗೂ ಅದಕ್ಕಿಂತ ಕಡಿಮೇಇದೆಯೋ ಅಂತಹ ಕುಟುಂಬವನ್ನು ಬಡತನದ ರೇಖೆಯ ಕೆಳಗಿನ ಕುಟುಂಬವೆಂದು ಪರಿಗಣಸಲಾಗುತ್ತದೆ. ಬಡತನದ ರೇಖೆಯನ್ನು ಕಾಲ ಕಾಲಕ್ಕೆ ಬೆಲೆಗಳ ಸೂಚ್ಯಂಕದ ಪ್ರಕಾರ ಪರಿಷ್ಕರಿಸಲಾಗುತ್ತದೆ. ೧೯೮೯-೯೦ ರಲ್ಲಿ ಅಂದಿನ ಬೆಲೆಗಳಿಗನುಗುಣವಾಗಿ ಸರಕಾರ ೬೪೦೦ ರೂಪಾಯಿಯನ್ನು ಬಡತನ ರೇಖೆ ಎಂದು ಗುರುತಿಸಿತು. ನಂತರ ೧೯೯೩-೯೪ ರಲ್ಲಿ ೧೧,೦೦೦ ರೂಪಾಯಿ ಮತ್ತು ಇದಕ್ಕೆ ಕಡಿಮೆ ಇರುವ ಕುಟುಂಬಗಳನ್ನು ಬಡತನ ರೇಖೆಯ ಕೆಳಗಡೆ ಇರುವ ಕುಟುಂಬಗಳೆಂದು ಕರೆಯುತ್ತಾರೆ. ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯಲ್ಲಿ ಫಲಾನುಭವಿ ಕುಟುಂಬಗಳ ಆದಾಯವನ್ನು ಬಡತನ ರೇಖೆಗಿಂತ ಹೆಚ್ಚು ಮಾಡುವ ಪ್ರಯತ್ನ ಮಾಡಲಾಗುವುದು.

ಈ ಯೋಜನೆಯು ನಿರ್ದಿಷ್ಟಗುರಿ ಹೊಂದಿದ್ದು ಪ್ರತಿ ವರ್ಷವೂ ನಿರ್ದಿಷ್ಟ ಸಂಖ್ಯೆಯಲ್ಲಿ ಗ್ರಾಮೀಣ ಕುಟುಂಬಗಳ ಆದಾಯವನ್ನು ಹೆಚ್ಚಿಸಿ ಅವರನ್ನು ಬಡತನದಿಂದ ಮುಕ್ತಮಾಡುವ ಪ್ರಯತ್ನ ಮಾಡಲಾಗುವುದು. ಈ ಯೋಜನೆಯು ಫಲಾನುಭವಿ ಕುಟುಂಬಗಳನ್ನು ನಾಲ್ಕು ಬಾಗಗಳಾಗಿ ವಿಂಗಡಿಸುತ್ತದೆ. (ನಾರಪ್ಪನವರ ೧೯೯೧).

ಅ) ಸಣ್ಣ ರೈತರು

ಬ) ಅತಿ ಸಣ್ಣ ರೈತರು

ಕ) ಕೃಷಿಕಾರ್ಮಿಕರು

ಡ) ಗ್ರಾಮೀಣ ಕಸಬುದಾರರು.

ಅ) ಸಣ್ಣರೈತರು

ಐದು ಎಕರೆ ಅಥವಾ ಅದಕ್ಕಿಂತ ಕಡಿಮೆ ಒಣ ಬೇಸಾಯದ ಭೂಮಿ ಹೊಂದಿದ ಅಥವಾ ೨.೫ ಎಕರೆ ನೀರಾವರಿ ಜಮೀನನ್ನು ಹೊಂದಿದ ರೈತರನ್ನು ಸಣ್ಣ ರೈತರೆಂದು ಪರಿಗಣಿಸಲಾಗುವುದು.

ಬ) ಅತಿ ಸಣ್ಣ ರೈತರು

ಎರಡೂವರೆ ಎಕರೆ ಅಥವಾ ಅದಕ್ಕಿಂತ ಕಡಿಮೆ ಒಣ ಬೇಸಾಯದ ಭೂಮಿ ಹೊಂದಿದ ಅಥವಾ ೧.೨೫ ಎಕರೆ ನೀರಾವರಿ ಜಮೀನು ಹೊಂದಿದ ಕುಟುಂಬಗಳನ್ನು ಅತಿ ಸಣ್ಣ ರೈತರೆಂದು ಪರಿಗಣಿಸಲಾಗುವುದು.

ಕ) ಕೃಷಿ ಕಾರ್ಮಿಕರು

ಯಾವ ಕುಟುಂಬಗಳಿಗೆ ಮನೆಯನ್ನು ಬಿಟ್ಟು ಯಾವುದೇ ತರಹದ ಭೂಮಿ ಇರುವುದಿಲ್ಲವೊ ಹಾಗು ಕುಟುಂಬದ ಆದಾಯದಲ್ಲಿ ಪ್ರತಿಶತ ಐವತ್ತರಷ್ಟು ಆದಾಯ ಕೃಷಿ ಉದ್ಯೋಗಗಳಿಂದ ಬರುತ್ತದೆಯೇ ಅಂತಹ ಕುಟುಂಬಗಳನ್ನು ಕೃಷಿ ಕಾರ್ಮಿಕರೆಂದು ವರ್ಗೀಕರಿಸಲಾಗುವುದು.

ಡ) ಗ್ರಾಮೀಣ ಕಸಬುದಾರರು

ಯಾವುದೇ ತರಹದ ಭೂಮಿ ಹೊಂದಿದ ಹಾಗು ವರ್ಷಕ್ಕೆ ೩೬೦೦ ರೂಪಾಯಿಗಳಿಗಿಂತ ಕಡಿಮೆ ಆದಾಯ ಹೊಂದಿದ ಹಾಗು ಗ್ರಾಮೀಣ ಉದ್ಯೋಗಗಳಿಂದ ಆದಾಯ ಪಡೆಯುವ ಕುಟುಂಬಗಳನ್ನು ಈ ವರ್ಗಕ್ಕೆ ಸೇರಿಸಲಾಗುವುದು.

ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯಲ್ಲಿ ಫಲಾನುಭವಿ ಕುಟುಂಬಗಳನ್ನು ಆಯ್ಕೆ ಮಾಡುವಾಗ ವರ್ಷಕ್ಕೆ೩೬೦೦ ರೂಪಾಯಿ ಅಥವಾ ಕಡಿಮೆ ಆದಾಯ ಇರುವ ಎಲ್ಲಾ ಕುಟುಂಬಗಳಿಗೆ ಮೊದಲು ಸಹಾಯ ನೀಡಿ ನಂತರ ೪೩೦೦ರೂಪಾಯಿಗಳ ವರೆಗೆ ಇರುವ ಆದಾಯದ ಕುಟುಂಬಗಳನ್ನು ಮತ್ತು ೬೪೦೦ ರೂಪಾಯಿಗಳ ಕೆಳಗಿನ ಆದಾಯ ಕುಟುಂಬಗಳನ್ನು ಆರಿಸಲಾಗುತ್ತದೆ. ರಾಜ್ಯ ಹಾಗು ಜಿಲ್ಲೆಗಳ ಫಲಾನುಭವಿ ಕುಟುಂಬಗಳ ಸಂಖ್ಯೆ ಗುರಿ ನಿಗದಿ ಪಡಿಸುವಾಗ ಪ್ರತಿಶತ ಮೂವತ್ತರಷ್ಟು ಪರಿಶಿಷ್ಟ ಜಾತಿ ಹಾಗು ಪರಿಶಿಷ್ಟ ಜನಾಂಗದವರಿಗೆ ಮೀಸಲಾಗಿಡುತ್ತದೆ. ಹಾಗು ಪ್ರತಿಶತ ನಲವತ್ತರಷ್ಟು ಮಹಿಳಾ ಫಲಾನುಭವಿಗಳನ್ನು ಆರಿಸುತ್ತಾರೆ.(India Development Report ೧೯೯೭)

ಫಲಾನುಭವಿಗಳ ಆಯ್ಕೆ

ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಗೆ ಫಲಾನುಭವಿಗಳ ಆಯ್ಕೆಯ ಪ್ರಕ್ರಿಯೆ ಗ್ರಾಮ ಸಭೆಗಳ ಮೂಲಕ ನಡೆಯುತ್ತದೆ.(ಗ್ರಾಮ ಸಭೆಯು, ಒಂದು ಗ್ರಾಮದ ೧೮ವರ್ಷ ತುಂಬಿದ ಆ ಗ್ರಾಮದ ಮತದಾರರ ಪಟ್ಟಿಯಲ್ಲಿ ಇರುವ ಎಲ್ಲರನ್ನು ಗ್ರಾಮಸಭೆಯು ಒಳಗೂಂಡಿರುತ್ತದೆ.).

ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಗಾಗಿ ಆಯ್ಕೆಮಾಡಿದ ಹಳ್ಳಿಗಳಲ್ಲಿ ಫಲಾನುಭವಿಗಳನ್ನು ಆಯ್ಕೆ ಮಾಡುವಲುಕೆಳಗೆ ನಮೂದಿಸಿದ ನಿಯಮಗಳನ್ನು ಪಾಲಿಸಲಾಗುತ್ತದೆ.

ಅ) ಗ್ರಾಮಸಭೆಗೆ ಕ್ಷೇತ್ರಾಭಿವೃದ್ಧಿ ಅಧಿಕಾರಿ, ವಿಸ್ತರಣಾಧಿಕಾರಿ, ಕ್ರೆಡಿಟ್ ವಿಸ್ತರಣಾಧಿಕಾರಿ, ಬ್ಯಾಂಕ್ ಮ್ಯಾನೇಜರ್, ಗ್ರಾಮ ಲೆಕ್ಕಿಕರು ಸೊಸೈಯಿಟಿಯ ಕಾರ್ಯದರ್ಶಿ ಎಲ್ಲರೂ ಹಾಜರಿರುತ್ತಾರೆ.

ಬ) ಫಲಾನುಭವಿ ಕುಟುಂಬಗಳನ್ನು ಆರಿಸುವಾಗ ಅಲ್ಲಿ ಕುಟುಂಬಗಳಲ್ಲಿ ಎಲ್ಲಕ್ಕಿಂತ ಬಡ ಕುಟುಂಬಗಳಿಗೆ ಆದ್ಯತೆ ಕೊಡಲಾಗುವುದು. (ನಾರಪ್ಪನವರ, ೧೯೯೧).

ಕ) ಆರಿಸುವ ಫಲಾನುಭವಿ ಕುಟುಂಬಗಳಿಗೆ ಪ್ರತಿಶತ ಮೂವತ್ತರಷ್ಟು ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡದ ಜನಾಂಗದವರನ್ನು ಹಾಗು ಪ್ರತಿಶತ ನಲವತ್ತರಷ್ಟು ಮಹಿಳಾ ಫಲಾನುಭವಿಗಳನ್ನು ಆರಿಸುತ್ತಾರೆ.

ಗ್ರಾಮ ಸಭೆ ಆದ ಒಂದು ವಾರದಲ್ಲಿ ಬ್ಯಾಂಕ್ ಅಧಿಕಾರಿಗಳು ಆಯ್ಕೆಯಾದ ಎಲ್ಲಾ ಕುಟುಂಬಗಳಿಗೆ ಸಾಲ ಮಂಜೂರಾತಿಗಾಗಿ ಬೇಕಾದ ಎಲ್ಲ ಸಾಲ ಪತ್ರಗಳನ್ನು ಸಿದ್ದಪಡಿಸಿ ಸಾಲ ಮಂಜೂರು ಮಾಡಿ ಸಹಾಯ ಧನ ಪತ್ರಗಳನ್ನು ಕ್ಷೇತ್ರಾಭಿವೃದ್ಧಿ ಅಧಿಕಾರಿಗಳಿಗೆ ಕಳುಹಿಸಿ ಕೊಡುತ್ತಾರೆ. ಸರಕಾರದ ಸಹಾಯಧನ ಮಂಜುರಾತಿ ಪತ್ರ ಮುಟ್ಟಿದ ನಂತರಹದಿನೈದು ದಿನಗಳ ಒಳಗಾಗಿ ಬ್ಯಾಂಕ್ ಮ್ಯನೇಜರ್ ಎಲ್ಲಾ ಸಾಲಗಳನ್ನು ವಿತರಣೆ ಮಾಡಿ ಆಸ್ತಿ ಖರೀದಿಸುವ ವ್ಯವಸ್ಥೆಮಾಡುತ್ತಾರೆ.

ಯಾವ ಫಲಾನುಭವಿ ಕುಟುಂಬವು ಮೊದಲನೆಯ ಸಲದ ಸಾಲವನ್ನು ಸರಿಯಾದ ರೀತಿಯಲ್ಲಿ ಉಪಯೋಗ ಮಾಡಿಕೊಂಡು ಹಾಗು ಬ್ಯಾಂಕಿನ ಕಂತುಗಳನ್ನು ಸರಿಯಾಗಿ ತುಂಬಿಯೂ ಸಹ ಬಡತನದ ರೇಖೆಯನ್ನು ದಾಟಲು ಸಾಧ್ಯವಾಗಿಲ್ಲವೋ ಅಂತಹ ಕುಟುಂಬವನ್ನು ಪುನಃ ಪರಿಶೀಲಿಸಿ ಎರಡನೆಯ ಸಲ ಸರಕಾರದ ಸಹಾಯ ಧನ ಮತ್ತು ಬ್ಯಾಂಕಿನಸಾಲ ಕೊಡ ಮಾಡುವ ಅವಕಾಶವನ್ನು ಕೂಡ ಈ ಯೋಜನೆಯಲ್ಲಿ ಕಲ್ಪಿಸಲಾಗಿದೆ. ಹೀಗೆ ಈ ಯೋಜನೆಯನ್ನು ನಿರೂಪಿಸಲಾಗಿದ್ದು, ಗ್ರಾಮೀಣ ಪ್ರದೇಶದಲ್ಲಿ ಪ್ರತಿ ವರ್ಷವೂ ನಿರ್ದಿಷ್ಟ ಸಂಖ್ಯೆಯಲ್ಲಿ ಗುರಿ ಹೊಂದಿದ ಕುಂಟುಬಗಳನ್ನುಬಡತನದಿಂದ ಮುಕ್ತ ಮಾಡುವ ಗುರಿಯನ್ನು ಹೊಂದಿರುತ್ತದೆ. ಇದು ಈ ಒಂದು ಯೋಜನೆಯ ವಿಶೇಷ ಗುಣ.

ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯ ವಿಂಗಡಣೆ:-

ಗ್ರಾಮೀಣ ಅಭಿವೃದ್ಧಿಗೆ ಸಂಬಂಧಿಸಿದ ಒಟ್ಟು ೬೧ ಕಾರ್ಯ ಕ್ರಮಗಳು ಈ ಯೋಜನೆಯೆಡಿಯಲ್ಲಿ ಬರುತ್ತವೆ. ಫಲಾನುಭವಿಗಳನ್ನು ಅವರ ಹಿನ್ನೆಲೆ, ತಂತ್ರಜ್ಞಾನ, ಸ್ವಂತ ಅನುಭವಗಳನ್ನು ಆಧರಿಸಿ ಆಯ್ಕೆ ಮಾಡಲಾಗುತ್ತದೆ. ಒಟ್ಟು ಅರವತ್ತೊಂದು ಯೋಜನೆಗಳಲ್ಲಿ ಈ ರೀತಿಯಾಗಿ ವಿಂಗಡಿಸಲಾಗುತ್ತದೆ.ಕೃಷಿಗೆ

ಸಂಬಂಧಿಸಿದ ಯೋಜನೆಗಳಿಗೆ ಶೇ-೮.೧೯ ರಷ್ಟು.

ನೀರಾವರಿಗೆ ಸಂಬಂಧಿಸಿದ ಯೋಜನೆಗಳಿಗೆ ಶೇ-೧೩.೧೧ ರಷ್ಟು.

ಹೈನುಗಾರಿಕೆಗೆ ಸಂಬಂಧಿಸಿದ ಯೋಜನೆಗಳಿಗೆ ಶೇ - ೧೪.೭೫ ರಷ್ಟು.

ಗುಡಿ ಕೈಗಾರಿಗೆ ಸಂಬಂಧಿಸಿದ ಯೋಜನೆಗಳಿಗೆ ಶೇ - ೪೭.೫೪ ರಷ್ಟು.

ಸೇವಾ ವಲಯಕ್ಕೆ ಸಂಬಂಧಿಸಿದ ಯೋಜನೆಗಳಿಗೆ ಶೇ- ೧೩.೧೧ ರಷ್ಟು.

ಇತರೆ ಸಂಬಂಧಿಸಿದ ಯೋಜನೆಗಳಿಗೆ ಶೇ-೩.೨೭ರಷ್ಟು.

ಯೋಜನೆಯ ನಿಬಂಧನೆಗಳಲ್ಲಿ ಈ ಮೇಲಿನ ರೀತಿಯಲ್ಲಿ ಸಾಲ ವಿತರಣೆ ಮಾಡಬೇಕೆಂದು ನಿರ್ದೇಶಿಸಲಾಗಿದೆ.

ಫಲಾನುಭವಿಗಳಿಗೆ ಸಿಗುವ ಸಹಾಯ ಧನ

ಸಾಲದ ಕೆಲವು (ಸ್ವಲ್ಪ) ಭಾಗವನ್ನು ಫಲಾನುಭವಿಗಳ ಪರವಾಗಿ ಸರಕಾರ ಭರಿಸುವುದಕ್ಕೆ ಸಹಾಯ ಧನ ಎಂದು ಕರೆಯುತ್ತೇವೆ. ಯೋಜನೆಯು ನಿಗದಿ ಪಡಿಸಿದಂತೆ ವಿವಿಧ ವರ್ಗಗಳ ಫಲಾನುಭವಿಗಳಿಗೆ ಈ ರೀತಿಯಾಗಿ ಸಹಾಯ ಧನ ಸಿಗುತ್ತದೆ.

ಅ) ಅತಿ ಸಣ್ಣ ರೈತರಿಗೆ,ಕೃಷಿಕಾರ್ಮಿಕರು, ಕುಶಲ ಕರ್ಮಿಗಳಿಗೆ ಶೇ ೩೩

ಬ) ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮತ್ತು ಅಂಗ ವಿಕಲರಿಗೆ ಶೇ ೫೦ ಸಹಾಯಧನ ಸಿಗುತ್ತದೆ.

ಪ್ರಾರಂಭದಲ್ಲಿ ಫಲಾನುಭವಿಗಳು ಸಹಾಯ ಧನದ ಹಣವನ್ನು ಬಿಟ್ಟು ಸಾಲ ಮರು ಪಾವತಿ ಮಾಡುತ್ತಿದ್ದರು. ಆದರೆ ಈಗಪೂರ್ತಿ ಸಾಲದ ಹಣ ಕಟ್ಟಿದ ನಂತರ ಸಹಾಯ ಧನದ ಹಣ ಠೇವಣಿ ರೂಪದಲ್ಲಿ ಸಿಗುತ್ತದೆ.

ಯೋಜನೆಗೆ ಹಣಕಾಸು

ಆರನೆಯ ಪಂಚವಾರ್ಷಿಕ ಯೋಜನೆಯಲ್ಲಿ ೧೫೦ ಲಕ್ಷ ಗ್ರಾಮೀಣ ಕುಟುಂಬಗಳು ಈ ಯೋಜನೆಯಡಿಯಲ್ಲಿ ಬರುತಿದ್ದವು. ಒಂದು ಕ್ಷೇತ್ರದಲ್ಲಿ ಸರಾಸರಿ ೬೦೦ ಕುಟುಂಬಗಳಿಗೆ ಸಹಾಯ ಮಾಡಲಾಯಿತು.

ಈ ಯೋಜನೆಗೆ ಹಣಕಾಸಿನ ಸಹಾಯವನ್ನು ಕೇಂದ್ರ ಹಾಗು ರಾಜ್ಯ ಸರಕಾರಗಳು ಸಮ ಪ್ರಮಾಣದಲ್ಲಿ ಮಾಡುತ್ತಲಿವೆ.ಅಂದರೆ ೫೦:೫೦ ಪ್ರಮಾಣದಲ್ಲಿ ನೋಡಿಕೊಳ್ಳುತ್ತಿವೆ. ಆರನೆಯ ಯೋಜನೆಯಲ್ಲಿ ಕೇಂದ್ರವು ೭೫೦ ಕೋಟಿ ರೂಪಾಯಿಗಳನ್ನು ಕೊಡಲು ನಿರ್ಧರಸಿದರೆ ಇಷ್ಟೇ ಮೊತ್ತದ ಹಣವನ್ನು ರಾಜ್ಯ ಸರಕಾರಳು ಕೊಡಲು ನಿರ್ಧರಿಸಿದವು. ಒಂದು ಕ್ಷೇತ್ರಕ್ಕೆ ೩೫ ಲಕ್ಷ ರೂಗಳನ್ನು ಮೀಸಲಿರಿಸಲಾಯಿತು. ಮೊದಲಿನ ವರ್ಷದಲ್ಲಿ ೫ಲಕ್ಷ ರೂಪಾಯಿಗಳನ್ನು ಎರಡನೇ ವರ್ಷದಲ್ಲಿ ೬ ಲಕ್ಷ ರೂಪಾಯಿಗಳನ್ನು ಮತ್ತು ಕೊನೆಯ ಮೂರು ವರ್ಷಗಳಿಗೆ ತಲಾ ೮ ಲಕ್ಷ ರೂಪಾಯಿಗಳನ್ನು ಕೊಡಲು ಹಣವನ್ನು ಮೀಸಲಿರಿಸಲಾಯಿತು.

ಫಲಾನುಭವಿಗಳ ಸಹಾಯಧನವನ್ನು ಸರಕಾರ ಭರಿಸುತ್ತದೆ. ಉಳಿದ ಮೊತ್ತವನ್ನು ಬ್ಯಾಂಕುಗಳು ಸಾಲದ ರೂಪದಲ್ಲಿ ನೀಡುತ್ತವೆ. ಯೋಜನೆಯ ವೈಫಲ್ಯದಿಂದಾಗಿ ಫಲಾನವುಭವಿಗಳು ಬ್ಯಾಂಕಿಗೆ ಕೊಡಬೇಕಾದ ಹಣ ಮರು ಪಾವತಿಯಾಗದೇಇರುವುದರಿಂದ ಬ್ಯಾಂಕುಗಳು ಯೋಜನೆಗೆ ಸಾಲ ಕೊಡುವುದುನ್ನು ಕಡಿಮೆ ಮಾಡಿವೆ.

ಹಣವನ್ನು ಖರ್ಚು ಮಾಡುವ ವಿಧಾನ:-

ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಗೆ ಕೊಡಮಾಡಲಾದ ಹಣವನ್ನು ಈ ಕೆಳಕಂಡಂತೆ ಖರ್ಚು ಮಾಡಲಾಗುವುದು.ಒಟ್ಟು ಹಣದಲ್ಲಿ ಶೇ ೭೨.೫ ರಷ್ಟು ಫಲಾನುಭವಿಗಳ ಯೋಜನೆಗಳಾಗಿ ವ್ಯಯಿಸಲಾಗುವುದು. ಶೇ ೧೦ರಷ್ಟುನ್ನುಫಲಾನುಭವಿಗಳಿಗೆ ತರಬೇತಿ ಕೊಡಲು ವ್ಯಯಿಸಲಾಗುವುದು. ಶೇ ೧೦ನ್ನು ಗ್ರಾಮೀಣ ಮೂಲ ಸೌಲಭ್ಯಗಳನ್ನು ಒದಗಿಸಲು ಖರ್ಚು ಮಾಡಲಾಗುವುದು. ಮತ್ತು ಶೇ ೭.೫ನ್ನು ಯೋಜನೆಯನ್ನು ಕಾರ್ಯಗತ ಮಾಡಲು ಆಡಳಿತ ವೆಚ್ಚಕ್ಕೆ ಖರ್ಚು ಮಾಡಲಾಗುವುದು.

ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯಲ್ಲಿ ಬ್ಯಾಂಕ್‌ಗಳ ಪಾತ್ರ

ಸರಕಾರವು ರಾಷ್ಟ್ರಿಕೃತ ವಾಣಿಜ್ಯ ಬ್ರಾಂಕುಗಳ ಮೂಲಕ ಹಾಗು ಗ್ರಾಮೀಣ ಬ್ಯಾಂಕು ಮತ್ತು ಕೃಷಿ ಅಭಿವೃದ್ಧಿ ಬ್ಯಾಂಕುಗಳ ಮೂಲಕ ಯೋಜನೆಯನ್ನು ಜಾರಿಗೊಳಿಸುತ್ತಲಿದೆ. DRDA ಯು (ಈಗ ಜಿಲ್ಲಾಪಂಚಾಯಿತಿ)( Lead Bank) ಪಾಲಕ ಬ್ಯಾಂಕುಗಳ ಮೂಲಕ ಕೆಲಸ ಮಾಡುತ್ತವೆ.

ಸರಕಾರ ಮತ್ತು ಬ್ಯಾಂಕುಗಳ ಸಹಯೋಗದೊಂದಿಗೆ ಫಲಾನುಭವಿಗಳಿಗೆ ಸಾಲ ನೀಡಿದರೂ ಸಾಲದ ಮರು ವಸೂಲಾತಿ ಜವಾಬ್ದಾರಿ ಸಂಪೂರ್ಣವಾಗಿ ಬ್ಯಾಂಕಿನದು. ಅದಕ್ಕೋಸ್ಕರ ಬ್ಯಾಂಕುಗಳು ಫಲಾನುಭವಿಗಳೊಡನೆ ಉತ್ತಮ ಸಂಬಂಧ ಹೊಂದುವುದು ಅತ್ಯಗತ್ಯ. ಅದಕ್ಕೋಸ್ಕರ ಸರಕಾರ ಬ್ಯಾಂಕುಗಳಿಗೆ

ಸಲಹೆ, ಸೂಚನೆ ನೀಡಲು ಭಾರತೀಯ ಕೇಂದ್ರ ಬ್ಯಾಂಕು (RBI) ಮತ್ತು National Bank for Agriculture and Rural Development (NABARD) ನ್ನು ನೇಮಿಸಿದೆ. ಬ್ಯಾಂಕುಗಳು ಯೋಜನೆಯ ಅನುಷ್ಠಾನದಲ್ಲಿ ಕೊನೆಯ ಹಂತವಾಗಿರುವುದರಿಂದ ಇವು ಮಹತ್ವದ ಪಾತ್ರವನ್ನುವಹಿಸುತ್ತವೆ.

ಆಡಳಿತದ ರಚನೆ (Organisation structure):-

ಈ ಯೋಜನೆಯು ಕೇಂದ್ರದ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಸಚಿವಾಲಯದಲ್ಲಿರುವ ಗ್ರಾಮೀಣಾಭಿವೃದ್ಧಿ ಇಲಾಖೆಯಡಿಯಲ್ಲಿ ಬರುತ್ತದೆ. ಈ ಇಲಾಖೆಯು ಯೋಜನೆಯ ನೀತಿ ಸಲಹೆ ಸಂಯೋಜನೆ ಮತ್ತು ಉಸ್ತುವಾರಿಯನ್ನು ನೋಡಿಕೊಳ್ಳುತ್ತದೆ. District Rural Development Agency (DRAD) ಎಂಬ ಸ್ವಾಯತ್ತ ಸಂಸ್ಥೆ ಇದನ್ನು ಕಾರ್ಯಗತ ಗೊಳಿಸುವ ಹೊಣೆ ಹೊತ್ತಿರುತ್ತದೆ. ಈಗ DRDA ಸ್ಥಾನದಲ್ಲಿ ಜಿಲ್ಲಾ ಪಂಚಾಯತಿಗಳು ಇರುವುದರಿಂದ ಕಾರ್ಯಗತಗೊಳಸುವ ಹೊಣೆ ಇದರ ಮೇಲಿದೆ.

ರಾಜ್ಯದಲ್ಲಿ ಯೋಜನೆ ಇಲಾಖೆ ಇಲ್ಲವೆ ಗ್ರಾಮಾಭಿವೃದ್ಧಿ ಇಲಾಖೆಯಡಿಯಲ್ಲಿ ಈ ಯೋಜನೆ ಬರುತ್ತದೆ. ಈ ಇಲಾಖೆಯು ಯೋಜನೆಯನ್ನು ಜಾರಿಗೊಳಿಸುವ ಹೊಣೆ ಹೊತ್ತಿರುತ್ತದೆ.

ರಾಜ್ಯಮಟ್ಟದಲ್ಲಿ ಸಂಯೋಜನಾ (Co-ordination) ಸಮಿತಿ ಇರುತ್ತದೆ. ಇದರ ಮುಖ್ಯಸ್ಥ ರಾಜ್ಯದ ಮುಖ್ಯ ಕಾರ್ಯದರ್ಶಿ ಆಗಿರುತ್ತಾರೆ. ಇಲ್ಲವೆ Agricultural Production Commissioner: principal secretary ಆಗಿರುತ್ತಾರೆ. ಈ ಒಂದು ಸಮಿತಿಗೆ ಸದಸ್ಯರು ಆಯಾ ಇಲಾಖೆಯ ಮುಖ್ಯಸ್ಥರಾಗಿರುತ್ತಾರೆ. ವ್ಯವಸಾಯ, ಕೃಷಿಹೈನುಗಾರಿಕೆ, ಸಹಕಾರ, ನೀರಾವರಿ ಅರಣ್ಯ, ಮೀನುಗಾರಿಕೆ, ಹಣಕಾಸು ಮತ್ತು ಯೋಜನಾ ಇಲಾಖೆಗಳಿಗೆಸೇರಿದವರಾಗಿರುತ್ತಾರೆ.

ಜಿಲ್ಲಾ ಮಟ್ಟದಲ್ಲಿ (DRDAಯು) ಜಿಲ್ಲಾ ಪಂಚಾಯಿತಿಯು ಜಾರಿಗೊಳಿಸುವ ಸಂಯೋಜಿಸುವ, ನಿಯಂತ್ರಿಸುವ ಹೊಣೆಹೊತ್ತಿರುತ್ತದೆ. CEO ಇದರ ಅಧ್ಯಕ್ಷರಾಗಿರುತ್ತಾರೆ. ಈ ಸಮಿತಿ ಸ್ಥಳೀಯ ಲೋಕಸಭೆಯ ಸದಸ್ಯರು, ಶಾಸಕರು,ಜಿಲ್ಲಾ ಪಂಚಾಯಿತಿಯ ಸದ್ಯಸರನ್ನು ಒಳಗೊಂಡಿರುತ್ತದೆ. ಹಾಗು ಬ್ಯಾಂಕ್ ಅಧಿಕಾರಿಗಳನ್ನು ಒಳಗೊಂಡಿರುತ್ತದೆ.

ಈ ಯೋಜನೆಯ (DRDAಯ) ಮುಖ್ಯ ಆಡಳಿತಾಧಿಕಾರಿಯು ರಾಜ್ಯದ ಹಿರಿಯ ಆಡಳಿಧಿಕಾರಿಗಳ ಗುಂಪಿಗೆ (Cadre) ಸೇರಿದವರಾಗಿರುತ್ತಾರೆ. ಅವರು ವಿಶೇಷ ಪರಿಣಿತಿ ಹೊಂದಿದ ವಿವಿಧ ವಲಯಕ್ಕೆ ಸೇರಿದ ಎಂಟು ಜನರನ್ನು ಸಮಿತಿಯ ಸದಸ್ಯರನ್ನಾಗಿ ನೇಮಿಸುತ್ತಾರೆ. ಇವರು ಮೂರು ತಿಂಗಳಿಗೊಮ್ಮೆ ಸಭೆ ಸೇರಿ ಅವಶ್ಯಕವಿಷಯಗಳ ಬಗ್ಗೆ ಚರ್ಚಿಸುತ್ತಾರೆ. ಅವಶ್ಯಕತೆ ಇದ್ದಾಗ ತುರ್ತು ಸಭೆಗಳನ್ನು ಸಹ ನಡೆಸಲಾಗುತ್ತದೆ.

ತಾಲ್ಲೂಕು ಮಟ್ಟದಲ್ಲಿ ಕ್ಷೇತ್ರಾಭಿವೃದ್ಧಿ ಅಧಿಕಾರಿ, ಕರ್ನಾಟಕದಲ್ಲಿ ೧೯೯೩ KPR ACT ಪ್ರಕಾರ ಕಾರ್ಯನಿರ್ವಾಹಕ ಅಧಿಕಾರಿ ಮುಖ್ಯ ಸ್ಥನಾಗಿರುತ್ತಾನೆ. ಮತ್ತು ಒಬ್ಬ ವಿಸ್ತರಾಣಾಧಿಕಾರಿ ಹಾಗು ೧೦ ಜನ ಗ್ರಾಮಮಟ್ಟದ ಸಹಾಯಕರನ್ನುಒಳಗೊಂಡಿರುತ್ತದೆ. (ಈ ರೀತಿಯಾದ ವ್ಯವಸ್ಥೆಯನ್ನು ನಾವು ಗುಜರಾತಿನಲ್ಲಿ ಮಾತ್ರ ಕಾಣುತ್ತೇವೆ.) ಇದು ರಾಜ್ಯದಿಂದರಾಜ್ಯಕ್ಕೆ ಬದಲಾಗುಬಹುದು. ಫಲಾನುಭವಿಗಳನ್ನು ಗುರುತಿಸಲು ಗ್ರಾಮ ಸಭೆಗಳಿಗೆ ಅಧಿಕಾರ ನೀಡಲಾಗಿದೆ.

ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯ ಸಾಧನೆಗಳು

ಈ ಪ್ರಬಂಧದಲ್ಲಿ ಹಗರಿಬೊಮ್ಮನಹಳ್ಳಿ ತಾಲ್ಲೂಕನ್ನು ಗಣನೆಗೆ ತೆಗೆದುಕೊಳ್ಳಲಾಗಿದೆ.೧೯೮೧-೮೨ ರಿಂದ ೧೯೯೫-೯೬ರ ಅವಧಿಯಲ್ಲಿ ಅಂದರೆ ೧೫ ವರ್ಷದ ಅವಧಿಯಲ್ಲಿ ಈ ಯೋಜನೆಯ ಸಾಧನೆಗಳೇನು ಎಂಬುದನ್ನು ನೋಡಬಹುದಾಗಿದೆ. ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಜನಸಂಖ್ಯೆ ೧೯೯೧ರ ಜನಗಣತಿ ಪ್ರಕಾರ ೧,೩೫,೦೨೬. ಇದರಲ್ಲಿ ಶೇ ೫೦ ರಷ್ಟುಬಡತನ ರೇಖೆಯ ಕೆಳಗಡೆ ಇದ್ದಾರೆ. ಅಂದರೆ ೬೭,೫೧೩ ಜನರು ಬಡತನ ರೇಖೆಯ ಕೆಳಗಡೆ ಜೀವಿಸುತ್ತಿದ್ದಾರೆ.

೧೫ ವರ್ಷದ ಕಾಲಾವಧಿಯಲ್ಲಿ ಒಟ್ಟು ವ್ಯವಸಾಯದ ಕಾರ್ಯ ಕ್ರಮಗಳಿಗಾಗಿ ೬೯೬ ಕುಟುಂಬಗಳಿಗೆ ಸಹಾಯ ಮಾಡಲಾಗಿದೆ. ನೀರಾವರಿ ಕಾರ್ಯಕ್ರಮಕ್ಕೆ ೩೭೨ ಕುಟುಂಬಗಳಿಗೆ ಸಹಾಯ ಮಾಡಲಾಗಿದೆ. ಆಕಳು ಮತ್ತು ಹೈನುಗಾರಿಕೆಗೆ ೪೩೧೮ ಕುಟುಂಬಗಳಿಗೆ ಸಹಾಯ ಮಾಡಲಾಗಿದೆ (ISB). ಕೈಗಾರಿಕೆ, ಸೇವಾವಲಯ ಮತ್ತು ವ್ಯಾಪಾರಕ್ಕೆ ೧೯೫೬ ಕುಟುಂಬಗಳಿಗೆ ಸಹಾಯ ಮಾಡಲಾಗದೆ. ಒಟ್ಟು ೭೩೪೨ ಕುಟುಂಬಗಳಿಗೆ ಸಹಾಯ ಮಾಡಿದೆ. ಒಟ್ಟು ಮೊತ್ತ ೨೮೫.೨೭ ಲಕ್ಷಗಳು. ಇದಕ್ಕೆ ಸಹಾಯ ಧನ ೧,೨೨, ೩೧೦ ಲಕ್ಷಗಳು. ಶೇಕಡ ೪೨.೮೭ ರಷ್ಟುಸಹಾಯಧನವನ್ನು ವಿತರಿಸಲಾಗಿದೆ.

ಒಟ್ಟು ಜನಸಂಖ್ಯೆಯಲ್ಲಿ ಬಡತನ ರೇಖೆ ಕೆಳಗೆ ಜೀವಿಸುತ್ತಿರುವ ಜನರ ಸಂಖ್ಯೆ ೬೭,೫೧೩ ಮತ್ತು ಒಟ್ಟು ಕುಟುಂಬಗಳು ೧೬೫೩೦. ಈಗಾಗಲೇ ಒಟ್ಟು ೭೩೪೨ ಕುಟುಂಬಗಳಿಗೆ ಸಹಾಯ ಮಾಡಲಾಗಿದೆ. ಇನ್ನೂ ೯೧೮೮ ಕುಟುಂಬಗಳಿಗೆ ಸಹಾಯ ದೊರಕಬೇಕಾಗಿದೆ. ಇದೇ ಯೋಜನೆಯ ಫಲವು ಎಲ್ಲರಿಗೂ ದೊರಕಬೇಕಾದರೆ ಹದಿನೆಂಟು-ಇಪ್ಪತ್ತು ವರ್ಷಗಳು ಬೇಕಾಗುತ್ತದೆ.

ಯೋಜನೆಯ ವೈಫಲ್ಯಕ್ಕೆ ಕಾರಣಗಳು:-

ಈ ಯೋಜನೆಯ ಬಗ್ಗೆ RBI,NABARD,NIRD ಗಳು ಅಧ್ಯಯನ ಮಾಡಿ ಯೋಜನೆಯ ವೈಫಲ್ಯಕ್ಕೆ ಕಾರಣಗಳನ್ನು ನೀಡಿದರೂ ಎಲ್ಲಾ ಪ್ರದೇಶಗಳಿಗೆ ಹೊಂದಬಹುದಾದ ಕೆಲವನ್ನು ಇಲ್ಲಿ ಗುರುತಿಸಬಹುದಾಗಿದೆ.

೧. ಅನಕ್ಷರತೆ ಹಾಗು ಅಜ್ಞಾನ

೨. ಸಾಲದ ಹಣವನ್ನು ಅನುಭೋಗ ಚಟುವಟಿಕೆಗಳಲ್ಲಿ ಉಪಯೋಗಿಸುವುದು.

೩. ಸಹಾಯ ಪಡೆದವರು ಪುನಃ ಅವರೇ ಸವಲತ್ತು ಪಡೆಯುವಲ್ಲಿ ಸಫಲರಾಗಿದ್ದಾರೆ.

೪. ಗ್ರಾಮ ಸಭೆಗಳು ಯಶಸ್ವಿಯಾಗಿ ನಡೆಯದೇ ಇರುವುದು.

೫. ಬೇಡಿಕೆಯನ್ನಾಧರಿಸಿದ ಉತ್ಪಾದನೆ ಇಲ್ಲದೆ ಇರುವುದು.

೬. ಕಾನೂನಿನಲ್ಲಿರುವ ಲೋಪದೋಷಗಳು.

೭. ಪ್ರದೇಶ ವಿಶಿಷ್ಟತೆಗೆ ಹೆಚ್ಚು ಗಮನ ಕೊಡದೆ ಇರುವುದು.

೮. ನೌಕರಶಾಹಿ ವ್ಯವಸ್ಥೆ ಅದಕ್ಷತೆಯಿಂದ ಕೂಡಿರುವುದು.

೯. ಸಾಲದ ಮರು ಪಾವತಿ ಕಟ್ಟುನಿಟ್ಟಿನಿಂದ ಕೂಡಿರದೆ ಇರುವುದು.

೧೦. ಸಾಲದ ಹಣ ಉತ್ಪಾದನೆಗೆ ಸಾಕಾಗದೆ ಇರುವುದು.

ಮೇಲಿನ ಕೆಲವು ಕಾರಣಗಳನ್ನು ನೀಡಿದರೂ ಸಹ ಇನ್ನು ಹಲವು ಕಾರಣಗಳಿರಬಹುದು.

ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯ ಸಮಸ್ಯೆಗಳಿಗೆ ಪರಿಹಾರಗಳು

ಈ ಒಂದು ಯೋಜನೆಯ ವೈಫಲ್ಯಕ್ಕೆ ಪರಿಹಾರ ಸೂಚಿಸಲು ಸಾಕಷ್ಟು ಅಧ್ಯಯನಗಳು ನಡೆದಿವೆ. ತಜ್ಞರು ಹಲವಾರುಪರಿಹಾರಗಳನ್ನು ಸೂಚಿಸಿದರೂ ಅವು ಕೆಲವು ಪ್ರದೇಶಗಳಿಗೆ ಮಾತ್ರ ಸೀಮಿತವಾದಂತವು. ಆದರೂ ಎಲ್ಲಾ ಪ್ರದೇಶಗಳಿಗೆ ಅನ್ವಯಿಸುವಂತಹ ಕೆಲವು ಪರಿಹಾರಗಳನ್ನು ತಜ್ಞರು ಸೂಚಿಸಿದ್ದಾರೆ. ಅವುಗಳು ಈ ರೀತಿ ಇವೆ.

ಕನ್ನಡ ವಿಶ್ವವಿದ್ಯಾಲಯ, ಹಂಪಿ
ಗ್ರಂಥಾಲಯ.

೧. ಯೋಜನೆಯ ಅನುಷ್ಠಾನದ ಪೂರ್ವದಲ್ಲಿ ಜನರಿಗೆ ಯೋಜನೆಗಳ ಬಗ್ಗೆ ತಿಳುವಳಿಕೆ ನೀಡುವುದು (Dev- ೧೯೯೫)

೨. ಪ್ರದೇಶ ವಿಶಿಷ್ಟತೆಗೆ ಹೆಚ್ಚು ಗಮನ ಕೊಡುವುದು.

೩. ಗ್ರಾಮ ಸಬೆಗಳಲ್ಲಿ ಎಲ್ಲಾ ವರ್ಗದ ಜನರು ಭಾಗವಹಿಸುವಂತೆ ಮಾಡುವುದು.

೪. ಫಲಾನುಭವಿಗಳಿಗೆ ಉತ್ತಮ ತರಬೇತಿ ನೀಡುವುದು.

೫. ಸಾಲ ಕೊಡುವಾಗ ಕಟ್ಟುನಿಟ್ಟನಿಂದ ಕೊಡಿರುವುದಕ್ಕಿಂತಲೂ ಸಾಲದ ವಸೂಲಾತಿ ಕಟ್ಟುನಿಟ್ಟನಿಂದ ಕೂಡಿರಬೇಕು.

೬. ಯೋಜನೆಯ ಜಾರಿಯಲ್ಲಿದ್ದಾಗಲೇ ಅದನ್ನು ಮೌಲ್ಯೀಕರಿಸುವುದು.

ಈ ರೀತಿ ಪರಿಹಾರಗಳು ಸಮಗ್ರ ರೀತಿಯ ಅಧ್ಯಯನಗಳಿಂದ ತಿಳಿದು ಬಂದಿದೆ. ಆದರೆ ಅವು ಎಲ್ಲಾ ಪ್ರದೇಶಗಳಿಗೆ ಹೊಂದಿಕೊಳ್ಳಲಾರವು ಎಂದು ನಾವು ಈಗಾಗಲೇ ತಿಳಿಸಿದ್ದೇವೆ. ಆದ್ದರಿಂದ ತಳಮಟ್ಟದಲ್ಲಿ ನಮ್ಮ ಅಧ್ಯಯನ ಕೈಗೊಳ್ಳಲಾಗಿದೆ.

### ೧.೪ ಅಧ್ಯಯನದ ಉದ್ದೇಶ

ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯನ್ನು ಕಾರ್ಯಗತಗೊಳಿಸುವುದು ಒಂದು ಸಂಕೀರ್ಣತೆಯಿಂದ ಕೂಡಿದ ಕಾರ್ಯವಾಗಿದೆ. ಯೋಜನೆಯ ಅನುಷ್ಠಾನದಲ್ಲಿ ಹಲವಾರು ಅಂಗಗಳು ಭಾಗವಹಿಸುತ್ತಲಿವೆ. ಯೋಜನೆಯುಸಫಲವಾಗಲು ಎಲ್ಲಾ ಅಂಗಗಳ ಜವಾಬ್ದಾರಿ ಸಮಪಾಲಿನದು. ಯಾವುದೇ ಒಂದು ಹಂತದಲ್ಲಿ ಒಂದು ಅಂಗ ವಿಫಲವಾದಲ್ಲಿ(ಎಡವಿದಲ್ಲಿ) ಯೋಜನೆಯು ಸಫಲವಾಗಲಾರದು ಮತ್ತು ಯೋಜನೆಯ ಉದ್ದೇಶ ಈಡೇರಲಾರದು. ಈ ಹಿನ್ನೆಲೆಯಲ್ಲಿಈ ಕೆಳಗಿನ ಉದ್ದೇಶಗಳನ್ನಿಟ್ಟುಕೊಂಡು ಈ ಅಧ್ಯಯನ ಕೈಗೊಳ್ಳಲಾಗಿದೆ. ಮತ್ತು ಕೊನೆಯಲ್ಲಿ ಯೋಜನೆಯ ಯಶಸ್ವಿ ಕಾರ್ಯಚರಣೆಗೆ ನಮ್ಮದೇ ಆದ ಕೆಲವು ಸಲಹೆ ನೀಡಲು ಪ್ರಯತ್ನಿಸಲಾಗಿದೆ.

೧. ಯೋಜನೆಯ ಉದ್ದೇಶಗಳು ಈಡೇರುತ್ತಿವೆಯೆ ಅಥವಾ ಇಲ್ಲವೆ ಎಂಬುದನ್ನು ಕಂಡು ಕೊಳ್ಳವುದು.

೨. ಯೋಜನೆಯ ಸೌಲಭ್ಯ ಪಡೆದವರ ಜೀವನ ಮಟ್ಟ ಸುಧಾರಿಸಿದೆಯೆ ಎಂಬುದನ್ನು ಕಂಡು ಹಿಡಿಯುವುದು.

೩. ಯೋಜನೆಯ ಯಾವ ಚಟುವಟಿಕೆಗಳು ಜನರಿಗೆ ಹೆಚ್ಚು ಪ್ರಯೋಜನಕಾರಿಯಾಗಿದೆ ಎಂಬುದನ್ನು ಗುರುತಿಸುವುದು.

೪. ಅರ್ಹ ವ್ಯಕ್ತಿಗಳಿಗೆ ಯೋಜನೆಯ ಸಹಾಯ ಸಿಗುತ್ತದೆಯೇ ಇಲ್ಲವೊ ಎಂಬುದನ್ನು ಕಂಡು ಹಿಡಿಯುವುದು.

೫. ಗ್ರಾಮ ಸಭೆಗಳಿಂದ ಅರ್ಹ ಫಲಾನುಭವಿಗಳು ಆಯ್ಕೆಯಾಗುತ್ತಿದ್ದಾರೆಯೆ ಎಂಬುದನ್ನು ಗುರುತಿಸುವುದು.

೬. ಯೋಜನೆಯ ಫಲಗಳು ಸೂಕ್ತವಾಗಿಲ್ಲದಿದ್ದರೆ ಅದಕ್ಕೆ ಕಾರಣಗಳನ್ನು ಕಂಡು ಹಿಡಿಯುವುದು.

೭. ಯೋಜನೆಯ ವಿಫಲವಾಗುತ್ತಿದ್ದರೆ ಯಾವ ಹಂತದಲ್ಲಿ ಮುಗ್ಗರಿಸುತ್ತದೆ ಎಂಬುದನ್ನು ಕಂಡು ಹಿಡಿಯುವುದು.

೮. ಯೋಜನೆಯ ಯಶಸ್ಸು ಮತ್ತು ವೈಫಲ್ಯದಲ್ಲಿ ಬ್ಯಾಂಕುಗಳ ಪಾತ್ರವನ್ನು ಅಧ್ಯಯನ ಮಾಡುವುದು.

೯. ಯೋಜನೆಯು ಸಫಲವಾಗಲು ನಮ್ಮದೇ ಆದ ನೀತಿ ನಿರೂಪಣೆಗಳನ್ನು ನೀಡುವುದು.

**೧.೫ ಅಧ್ಯಯನದ ಸ್ವರೂಪ, ವ್ಯಾಪ್ತಿ ಮತ್ತು ಮಹತ್ವ:**

ಪ್ರಸ್ತುತ ಅಧ್ಯಯನ ಸೈದ್ಧಾಂತಿಕ ನೆಲೆಯನ್ನಾಧರಿಸಿದ ನಿದರ್ಶನಾತ್ಮಕ (empirical) ವಾದ ಅಧ್ಯಯನವಾಗಿದೆ. ಫಲಾನುಭವಿಗಳನ್ನು ಆರಿಸುವ ಗ್ರಾಮಸಭೆಗಳು, ಯೋಜನೆಯನ್ನು ಅನುಷ್ಠಾನಗೊಳಿಸುವ ಸರಕಾರಿ ಅಧಿಕಾರಿಗಳು ಮತ್ತು ಬ್ಯಾಂಕ್ ಅಧಿಕಾರಿಗಳನ್ನು ಕ್ಷೇತ್ರಕಾರ್ಯದಲ್ಲಿ ಸಂದರ್ಶಿಸಲಾಗಿದೆ. ಮತ್ತು ಫಲಾನುಭವಿಗಳ ಕುಟುಂಬಗಳಿಗೆಹೋಗಿ ಅವರ ಸಾಮಾಜಿಕ ಮತ್ತು ಆರ್ಥಿಕ ಜೀವನಗಳನ್ನು ನೋಡಲಾಗಿದೆ. ಇದರಿಂದ ಯೋಜನೆಯು ಎಷ್ಟರ ಮಟ್ಟಿಗೆಸದುಪಯೋಗವಾಗಿದೆ ಎಂದು ತಿಳಿಯಲಾಗಿದೆ ಮತ್ತು ಗ್ರಾಮಸಭೆಗಳಿಗೆ ಹಾಜರಾಗಿ (ದಿನಾಂಕ:೩-೦೭-೧೯೯೭)ಗ್ರಾಮಸಭೆಗಳು ಫಲಾನುಭವಿಗಳನ್ನು ಯಾವ ರೀತಿ ಆಯ್ಕೆ ಮಾಡುತ್ತವೆ ಎಂಬುದನ್ನು ಪ್ರತ್ಯಕ್ಷವಾಗಿ ನೋಡಲಾಗಿದೆ. ಇದರ ನಿಯಮಗಳ ಪ್ರಕಾರ ಫಲಾನುಭವಿಗಳು ಆಯ್ಕೆಯಾಗುತ್ತಾರೋ ಇಲ್ಲವೊ ಎಂಬುದನ್ನು ತಿಳಿಯಲು ಪ್ರಯತ್ನಿಸಿದ್ದೇವೆ.

ಸಮಗ್ರ ಗ್ರಾಮೀಣಾಭಿವೃದ್ಧಿ ಯೋಜನೆ ದೇಶದಲ್ಲಿ ೧೯೭೮-೭೯ರಿಂದ ಜಾರಿಗೆ ಬಂದಿದೆ. ಹಗರಿಬೊಮ್ಮನಹಳ್ಳಿ ತಾಲ್ಲೂಕಿನಲ್ಲಿ ೧೯೮೧-೮೨ರಿಂದ ಅನುಷ್ಠಾನದಲ್ಲಿದೆ. ಪ್ರಸ್ತುತ ಅಧ್ಯಯನವನ್ನು ಬಳ್ಳಾರಿ ಜಿಲ್ಲೆಯ ಹಗರಿಬೊಮ್ಮನಹಳ್ಳಿ ತಾಲ್ಲೂಕಿಗೆ ಸೀಮಿತಗೊಳಿಸಿಕೊಳ್ಳಲಾಗಿದೆ. ಈ ತಾಲೂಕಿನಲ್ಲಿ ನಾಲ್ಕು ಕಂದಾಯ ಹೋಬಳಿಗಳಿದ್ದು ಅವು ಹಗರಿಬೊಮ್ಮನಹಳ್ಳಿ, ತಂಬ್ರಹಳ್ಳಿ, ಹಂಪಸಾಗರ ಮತ್ತು ಕೋಗಳಿ ಆಗಿವೆ. ಒಂದೊಂದು ಹೋಬಳಿಗಳಲ್ಲಿ ಎರಡು ಮತ್ತು ಒಂದು ಹೋಬಳಿಯಲ್ಲಿ ಮೂರು ಗ್ರಾಮಗಳನ್ನು ಆಯ್ಕೆಮಾಡಿಕೊಳ್ಳಲಾಗಿದೆ. ಸಮಯದ ಅಭಾವದಿಂದ ನಮ್ಮ ಕ್ಷೇತ್ರವನ್ನು

ಸೀಮಿತಗೊಳಿಸಲಾಗಿದೆ. ನಮ್ಮ ಕ್ಷೇತ್ರ ಕಾರ್ಯ ೨ನೇ ಜುಲೈ ೧೯೯೭ರಿಂದ ೧೮ನೇ ಜುಲೈ ೧೯೯೭ರವರಗೆ ಕೈಗೊಳ್ಳಲಾಗಿದೆ. ಈ ಅವಧಿಯಲ್ಲಿ ದ್ವಿತೀಯ ಮೂಲಗಳನ್ನಾಧರಿಸಿ ಕ್ಷೇತ್ರಕಾರ್ಯ ಕೈಗೊಳ್ಳಲಾಗಿದೆ.

ಪ್ರಸ್ತುತದ ಅಧ್ಯಯನವು ಅಧ್ಯಯನ ಕ್ಷೇತ್ರಕ್ಕೆ ಹೊಸದಾದ ಕೊಡುಗೆಯನ್ನು ನೀಡುತ್ತದೆ. ಯೋಜನೆಯು ಫಲಾನುಭವಿಗಳನ್ನು, ಗ್ರಾಮಸಭೆಯನ್ನು ನಡೆಸಿಕೊಡುವ ಪ್ರಜಾಪ್ರತಿನಿಧಿಗಳನ್ನು, ಯೋಜನೆಯ ಅನುಷ್ಠಾನಗೊಳಿಸುವ ಹೊಣೆ ಹೊತ್ತಿರುವ ಸರ್ಕಾರಿ ಮತ್ತು ಬ್ಯಾಂಕ್ ಅಧಿಕಾರಿಗಳನ್ನು ಒಳಗೊಂಡಿರುವುದರಿಂದ ಇದೊಂದು ವಿನೂತನ ಅಧ್ಯಯನದ ವಿಧಾನವಾಗಿದೆ. ಫಲಾನುಭವಿಗಳು ಯೋಜನೆಯ ಬಗ್ಗೆ ಯಾವ ಅಭಿಪ್ರಾಯ ಹೊಂದಿದ್ದಾರೆ ಎಂಬುದನ್ನು ತಿಳಿಯಲಾಗಿದೆ.

ಇಂದು ಯೋಜನೆಗಳು ರಾಷ್ಟ್ರ ಮತ್ತು ರಾಜ್ಯಮಟ್ಟದಲ್ಲಿ ರೂಪಗೊಳ್ಳುತ್ತಿವೆ. ಮತ್ತು ಅದೇ ರೀತಿಯಾಗಿ ಮೌಲ್ಯಮಾಪನ ನಡೆಯುತ್ತಲಿದೆ. ರಾಷ್ಟ್ರ ಮತ್ತು ರಾಜ್ಯ ಮಟ್ಟದಲ್ಲಿನ ಯೋಜನೆ ಮತ್ತು ಮೌಲ್ಯಮಾಪನಗಳು ಎಲ್ಲಾ ಪ್ರದೇಶಗಳಿಗೂ ಅನ್ವಯವಾಗಲಾರವು. ಕೆಳಮಟ್ಟದಲ್ಲಿರುವ ಸಮಸ್ಯೆಗಳನ್ನು ಅರಿತು ಇಂದು ಯೋಜನೆಗಳು ರೂಪುಗೊಳ್ಳುತ್ತಿಲ್ಲ. ನಮ್ಮ ಅಧ್ಯಯನ ಕೆಳಮಟ್ಟದಲ್ಲಿರುವುದರಿಂದ (ತಾಲ್ಲೂಕು ಮಟ್ಟದಲ್ಲಿ) ಕೆಳಮಟ್ಟದಲ್ಲಿರುವ ಸಮಸ್ಯೆಗಳನ್ನು ಅರಿತು ಅವುಗಳಿಗೆ ಸೂಕ್ತ ಸಲಹೆಗಳನ್ನು ನೀಡಲು ಸೂಕ್ತವಾದುದಾಗಿದೆ. ಈ ಹಿನ್ನೆಲೆಯಲ್ಲಿ ನಮ್ಮ ಅಧ್ಯಯನವು ನೀತಿ ನಿರೂಪಣೆಗೆ ಸಹಾಯಕವಾಗಬಹುದು. ಸಮಗ್ರ ಗ್ರಾಮೀಣಭಿವೃದ್ಧಿ ಯೋಜನೆಯಲ್ಲಿರುವ ವಿವಿಧ ಚಟುವಟಿಕೆಗಳಲ್ಲಿ ಯಾವ ಪ್ರದೇಶಗಳಿಗೆ ಯಾವ ಚಟುವಟಿಕೆಗಳು ಪ್ರಯೋಜನಕಾರಿಯಾಗಿವೆ ಮತ್ತು ಯಾವ ಚಟುವಟಿಕೆಗಳು ಪ್ರಯೋಜನಕಾರಿಯಾಗಿಲ್ಲ ಎಂಬುದನ್ನು ತಿಳಿದು ಯೋಜನೆ ರೂಪಿಸಲು ಸಹಾಯಕವಾಗುವಂತೆ ಸಲಹೆ ನೀಡಲಾಗಿದೆ.

## ೧.೬ ಅಧ್ಯಯನ ವಿಧಾನ

ಪ್ರಸ್ತುತ ಅಧ್ಯಯನವು ಸಮಗ್ರ ಗ್ರಾಮೀಣಾಭಿವೃದ್ಧಿ ಯೋಜನೆಯ ಪ್ರಕ್ರಿಯೆ ಹಾಗೂ ಪರಿಣಾಮಗಳ ಮೌಲ್ಯಮಾಪನ ಅಧ್ಯಯನವಾಗಿದೆ. ಕ್ಷೇತ್ರಕಾರ್ಯದ ಮೂಲಕ ಸಂಗ್ರಹಿಸಿದ ಮಾಹಿತಿಯನ್ನು ವಿಶ್ಲೇಷಿಸಿ-ತಥ್ಯಗಳನ್ನು ಕಂಡುಕೊಳ್ಳುವುದರ ಜೊತೆಗೆ ಅಭಿವೃದ್ಧಿ ಮತ್ತು ಗ್ರಾಮೀಣಾಭಿವೃದ್ಧಿಗೆ ಸಂಬಂಧಿಸಿದಂತೆ ಏಕರೂಪ ಗ್ರಾಮರಚನೆ, ಬಹುರೂಪ ಗ್ರಾಮರಚನೆ, ಪರಿಹಾರತ್ಮಾಕ ಕಾರ್ಯಕ್ರಮ, ಧಾರಣಶಕ್ತಿ, ಮಾನವ ಮುಖಿಬಡತನ -ಮುಂತಾದ ಪರಿಭಾವನೆಗಳನ್ನು ಸೂಕ್ತವಾಗಿ ಬಳಸಲಾಗಿದೆ.

ಅಭಿವೃದ್ಧಿಯೋಜನೆಗಳ ಕಾರ್ಯಾನುಷ್ಠಾನ ಪ್ರಕ್ರಿಯೆ ಹಾಗೂ ಅದರಿಂದ ಉಂಟಾಗುವ ಪರಿಣಾಮ ಬದಲಾವಣೆಗಳೆರಡನ್ನು ನಮ್ಮ ಅಧ್ಯಯನದಲ್ಲಿ ಸಮನ್ವಯಗೊಳಿಸಲಾಗಿದೆ. ಇದರಿಂದಾಗಿ ಇದೊಂದು ವಿನೂತನ ಅಧ್ಯಯನ ವಿಧಾನವಾಗಿದೆ. ಸೈದ್ಧಾಂತಿಕ ಅಂಶಗಳು ಹಾಗೂ ಆಚರಣಾತ್ಮಕ ಅಂಶಗಳನ್ನು ಇಲ್ಲಿ ಸಮನ್ವಯಗೊಳಿಸಲು ಪ್ರಯತ್ನಿಸಲಾಗಿದೆ. ಪರಿಮಾಣಾತ್ಮಕ ಮಾಹಿತಿಯ ಜೊತೆಗೆ ಗುಣಾತ್ಮಕ ಮಾಹಿತಿಯನ್ನು ಬಳಸಲಾಗಿದೆ.

ಇಲ್ಲಿ ನಾವು ಬಹುಳಾಕಾರಿ ಅಧ್ಯಯನ ವಿಧಾನವನ್ನು ಅಳವಡಿಸಿಕೊಂಡಿದ್ದೇವೆ. ಫಲಾನುಭವಿಗಳನ್ನು ಏಕರೂಪ ಗುಂಪಾಗಿ ಇಲ್ಲಿ ಪರಿಗಣಿಸಿಲ್ಲ. ಫಲಾನುಭವಿಗಳ ವರಮಾನ ಹಾಗೂ ಜಾತಿ ಆಧಾರದ ಮೇಲೆ ವಿಂಗಡಿಸಿ ಸಮಗ್ರ ಗ್ರಾಮೀಣಾಲಭಿವೃದ್ಧಿ ಯೋಜನೆಯ ಪರಿಣಾಮಗಳನ್ನು ಗುರುತಿಸಲು ಪ್ರಯತ್ನಿಸಿದ್ದೇವೆ. ಒಂದು ಶ್ರೇಣೀಕೃತ ವ್ಯವಸ್ಥೆಯಲ್ಲಿ ಈ ಬಗೆಯ ಬಹುಳಾಕಾರಿ ಅಧ್ಯಯನ ವಿಧಾನವು ಹೆಚ್ಚು ಉಪಯುಕ್ತ ಎಂದು ನಾವು ಭಾವಿಸಿದ್ದೇವೆ. ಶ್ರೇಣೀಕೃತ ವ್ಯವಸ್ಥೆಯಲ್ಲಿ ಅಭಿವೃದ್ಧಿಯ ಫಲಗಳು ಎಲ್ಲಾ ವರ್ಗ ಹಾಗೂ ಜಾತಿಗಳಿಗೆ ಒಂದೇ ಸ್ವರೂಪದಲ್ಲಿ ಮತ್ತು ಪ್ರಮಾಣದಲ್ಲಿ ದೊರೆಯುವುದಿಲ್ಲ. ಆದ್ದರಿಂದ ಅಭಿವೃದ್ಧಿಯ ಫಲಗಳು ಹರಿಯುವ ಸ್ವರೂಪವು ಹೇಗೆ ವರ್ಗ ಮತ್ತು ಜಾತಿ ಲಕ್ಷಣಗಳಿಂದ ಪ್ರಭಾವಿತವಾಗುತ್ತವೆ ಎಂಬುದು ಬಹಳ ಮುಖ್ಯವಾಗುತ್ತದೆ.

೧.೬(೧)ನಮೂನೆಯ ಆಯ್ಕೆ ಹಾಗೂ ನಮೂನೆ ವಿನ್ಯಾಸ

ನಮ್ಮ ಅಧ್ಯಯನಕ್ಕೆ ಉದ್ದೇಶ ಪೂರ್ಣವಾಗಿ ಬಳ್ಳಾರಿ ಜಿಲ್ಲೆಯ ಹಗರಿಬೊಮ್ಮನಹಳ್ಳಿ ತಾಲ್ಲೂಕನ್ನು ಆಯ್ಕೆ ಮಾಡಿಕೊಂಡಿದ್ದೇವೆ. ಕಾರಣವೇನೆಂದರೆ ೧೯೯೧ರ ಜನಗಣತಿಯ ಪ್ರಕಾರ ಹಗರಿಬೊಮ್ಮನಹಳ್ಳಿ ತಾಲ್ಲೂಕು ಸಂಪೂರ್ಣವಾಗಿ ಗ್ರಾಮೀಣ ಪ್ರದೇಶದಿಂದ ಕೂಡಿದ ಪ್ರದೇಶವಾಗಿದೆ. ಇಡೀ ತಾಲ್ಲೂಕು 'ಏಕರೂಪ ರಚನೆ'ಯನ್ನು ಹೊಂದಿದೆ. ಈ ತಾಲ್ಲೂಕಿನಲ್ಲಿನ ಒಟ್ಟು ಶ್ರಮಶಕ್ತಿಯಲ್ಲಿ (೬೦,೭೮೧) ಶೇ.೮೫ ರಷ್ಟು ಕೃಷಿಯನ್ನು ಅವಲಂಬಿಸಿದ್ದಾರೆ. ಒಟ್ಟು ಶ್ರಮಶಕ್ತಿಯಲ್ಲಿ ಕೃಷಿ ಕಾರ್ಮಿಕರ ಪ್ರಮಾಣ ಶೇ. ೪೪.೨೧. ಒಟ್ಟು ಕೃಷಿ ಕಾರ್ಮಿಕರಲ್ಲಿ (೨೬,೮೭೭) ಶೇ.೫೮.೪೧ ರಷ್ಟು ಮಹಿಳಾ ಕಾರ್ಮಿಕರಾಗಿದ್ದಾರೆ. ಇಂತಹ ವ್ಯವಸ್ಥೆಯಲ್ಲಿ ಸಮಗ್ರ ಗ್ರಾಮೀಣಾಭಿವೃದ್ಧಿ ಯೋಜನೆಯು ಯಾವ ರೀತಿಯ ಬದಲಾವಣೆ ತರುತ್ತದೆ ಎಂಬುದನ್ನು ನಮ್ಮ ಅಧ್ಯಯನದಲ್ಲಿ ಹಿಡಿದಿಡಲೂ ಪ್ರಯತ್ನಸಿದ್ದೇವೆ.

ಹಗರಿಬೊಮ್ಮನಹಳ್ಳಿ ತಾಲ್ಲೂಕಿನಲ್ಲಿ ನಾಲ್ಕು ಕಂದಾಯ ಹೋಬಳಿಗಳಿವೆ ಮತ್ತು ಒಟ್ಟು ೫೫ ಗ್ರಾಮಗಳಿವೆ. ನಾವು ನಮೂನೆಯ ಮೂರು ಹೋಬಳಿಗಳಿಂದ ತಲಾ ಎರಡು ಗ್ರಾಮಗಳನ್ನು ಹಾಗೂ ಒಂದು ಹೋಬಳಿಯಿಂದ ಮೂರು ಗ್ರಾಮಗಳನ್ನು ಆಯ್ದುಕೊಂಡಿದ್ದೇವೆ. ಒಟ್ಟು ನಮ್ಮ ನಮೂನೆಯಲ್ಲಿ ಒಂಬತ್ತು ಗ್ರಾಮಗಳಿವೆ. ಈ ೯ ಗ್ರಾಮಗಳಲ್ಲಿ ಕೆಲವು ತಾಲ್ಲೂಕು ಕೇಂದ್ರಗಳಿಂದ ಹತ್ತಿರವಿದ್ದರೆ, ಕೆಲವು ತಾಲ್ಲೂಕು ಕೇಂದ್ರದಿಂದ ದೂರದಲ್ಲಿವೆ. ಗ್ರಾಮ ಪಂಚಾಯಿತಿ ಇರುವ ಗ್ರಾಮಗಳನ್ನು ನಾವು ಆಯ್ದುಕೊಂಡಿದ್ದೇವೆ.

ನಮ್ಮ ಅಧ್ಯಯನಕ್ಕೆ ಆಯ್ದುಕೊಂಡಿರುವ ಫಲಾನುಭವಿಗಳ ಸಂಖ್ಯೆ ೫೨. ಇವರಲ್ಲಿ ೩೩ ಪುರುಷರು(ಶೇ.೬೩.೪) ಮತ್ತು ೧೯ ಮಹಿಳೆಯರು (ಶೇ.೩೬.೫) ಇದ್ದಾರೆ. ಇವರಲ್ಲಿ ಪರಿಶಿಷ್ಟಜಾತಿ, ಪರಿಶಿಷ್ಟಪಂಗಡ ಹಾಗೂ ಹಿಂದುಳಿದ ವರ್ಗ ಪ್ರಮಾಣ ಕ್ರಮವಾಗಿ ಶೇ.೨೩.೦೭, ಶೇ.೫.೭೬ ಮತ್ತು ಶೇ.೭೧.೧೫. ನಮ್ಮ ನಮೂನೆಯಲ್ಲಿ ಸಮಗ್ರ ಗ್ರಾಮೀಣಾಭಿವೃದ್ಧಿ ಯೋಜನೆಯಲ್ಲಿ ಬರುವ ಎಲ್ಲ ಚಟುವಟಿಕೆಗಳು ಸೇರುವಂತೆ ನೋಡಿಕೊಳ್ಳಲಾಗಿದೆ.

೧.೬(೨)ಪ್ರಾಥಮಿಕ ಮಾಹಿತಿ ಮತ್ತು ಆನುಷಂಗಿಕ ಮಾಹಿತಿ

ಇದು ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯನ್ನು ಕುರಿತ ಪ್ರಕ್ರಿಯೆ ಹಾಗೂ ಪರಿಣಾಮಗಳ ಮೌಲ್ಯ ಮಾಪನ ಅಧ್ಯಯನವಾಗಿರುವುದರಿಂದ, ನಮ್ಮ ಅಧ್ಯಯನಕ್ಕೆ ಅಗತ್ಯವಾದ ಮಾಹಿತಿಯನ್ನು ಸರ್ಕಾರಿ ಅಧಿಕಾರಿಗಳು, ಬ್ಯಾಂಕ್ ನೌಕರರು ಹಾಗೂ ಫಲಾನುಭವಿಗಳಿಂದ ಸಂಗ್ರಹಿಸಲಾಗಿದೆ.. ಫಲಾನುಭವಿಗಳಿಂದ ಮಾಹಿತಿಯನ್ನು ಪ್ರಶ್ನಾವಳಿಯ ಮೂಲಕ ಸಂಗ್ರಹಿಸಲಾಗಿದೆ. ಗ್ರಾಮ ಸಭೆಗಳಿಗೆ ಹಾಜರಾಗಿ ಫಲಾನುಭವಿಗಳ ಆಯ್ಕೆ ಹೇಗೆ ನಡೆಯುತ್ತದೆ ಎಂಬುದನ್ನು ಮುಖತಃ ಪರಿಶೀಲಿಸಲಾಗಿದೆ. ಬ್ಯಾಂಕು ಅಧಿಕಾರಿಗಳನ್ನು ಹಾಗೂ ಸರ್ಕಾರಿ ಅಧಿಕಾರಿಗಳನ್ನು ಸಂಪರ್ಕಿಸಿ ಸಂದರ್ಶನದ ಮೂಲಕ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯ ಕಾರ್ಯಾನುಷ್ಠಾನ ಪ್ರಕ್ರಿಯೆ ಬಗ್ಗೆ ವಿವರಣೆ ಪಡೆಯಲಾಗಿದೆ.

ಆನುಷಂಗಿಕ ಮಾಹಿತಿಯನ್ನು ಬಳ್ಳಾರಿ ಜಿಲ್ಲಾ ಜನಗಣತಿ (೧೯೯೧), ಜಿಲ್ಲಾ ಅಂಕಿ ಅಂಶಗಳ ನೋಟ (೧೯೯೪-೯೫) ಮತ್ತು ತಾಲ್ಲೂಕು ಪಂಚಾಯತಿ ಸಮಿತಿ ಹಗರಿಬೊಮ್ಮನಹಳ್ಳಿ ಇವರಿಂದ ಸಂಗ್ರಹಿಸಲಾಗಿದೆ.

## ೧.೭ ಪೂರ್ವ ಅಧ್ಯಯನಗಳ ಸಮೀಕ್ಷೆ

ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆ, ಅದರ ಅನುಷ್ಠಾನ,ಪರಿಣಾಮ ಮುಂತಾದವುಗಳನ್ನುಕುರಿತಂತೆ ನೂರಾರು ಅಧ್ಯಯನಗಳು ನಡೆದಿದೆ. ಬಹುಪಾಲು ಅಧ್ಯಯನಗಳು ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯ ವೈಫಲ್ಯಗಳನ್ನುಎತ್ತಿ ಹೇಳಿವೆ. ಆದರೆ ಈ ಯೋಜನೆಯು ಅನೇಕ ರೀತಿಯ ಅಪೇಕ್ಷಣೀಯ ಪರಿಣಾಮಗಳನ್ನು ಬೀರಿದೆ. ಈ ಭಾಗದಲ್ಲಿ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆ ಕುರಿತಂತೆ ನಡೆದ ಮುಖ್ಯ ಅಧ್ಯಯನಗಳ ಸಾರಾಂಶವನ್ನು ಹಿಡಿದಿಡಲು ಪ್ರಯತ್ನಿಸಲಾಗಿದೆ.

### ೧.ವಿನೋದ್ ವ್ಯಾಸುಲುರವರ ಕರ್ನಾಟಕದ ಬಗೆಗಿನ ಅಧ್ಯಯನ:

ಬಡತನ ನಿವಾರಣೆಯನ್ನು ಉದ್ದೇಶವಾಗಿಟ್ಟುಕೊಂಡಿರುವ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯನ್ನು ಯಾಂತ್ರಿಕವಾಗಿ ಅಧಿಕಾರಶಾಹಿಯು ಅನುಷ್ಠಾನಗೊಳಿಸುತ್ತಿದೆ. ಸರ್ಕಾರವು ನಿಗದಿ ಪಡಿಸಿದ ವಾರ್ಷಿಕ'ಸಂಖ್ಯೆ'ಹಾಗೂ 'ಹಣದ ಮೊತ್ತ'ದ ಗುರಿಗಳ ಸಾಧನೆಯನ್ನೇ ಮಾನದಂಡವಾಗಿಟ್ಟು ಮೌಲ್ಯಮಾಪನ ನಡೆಸಲಾಗುತ್ತಿದೆ. ವ್ಯಾಸುಲುಪ್ರಕಾರ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯ ಮುಖ್ಯ ಲೋಪ ಇದಾಗಿದೆ.

ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯ ಆಶ್ರಯದಲ್ಲಿ ನಡೆಯುತ್ತಿರುವ ಚಟುವಟಿಕೆಗಳಿಗೆ ಸೂಕ್ತವಾದ ತಂತ್ರಜ್ಞಾನದಅಡಿಪಾಯ ದೊರೆಯುತ್ತಿಲ್ಲ. ಈ ಯೋಜನೆಯ ಅನುಷ್ಠಾನ ಪ್ರಕ್ರಿಯಯಲ್ಲಿ 'ಸಂಶೋಧನೆ ಹಾಗೂ ತಂತ್ರಜ್ಞಾನ'ದ ಪಾತ್ರವನ್ನು ಸಮನ್ವಯ ಗೊಳಿಸಿಕೊಂಡಿಲ್ಲ.

ವ್ಯಾಸುಲುರವರ ಇನ್ನೊಂದು ಬಹುಮುಖ್ಯ ಟೀಕೆಯೆಂದರೆ ಬಡತನ ನಿವಾರಣಾ ಕಾರ್ಯಕ್ರಮಗಳು ಬಡತನವನ್ನುಹೆಚ್ಚುಸಹ್ಯ ಮಾಡುವಂತಹ ಉದ್ದೇಶಕ್ಕೆ ಬದ್ಧವಾಗಿದ್ದಾವೆಯೆ ವಿನಾ ಮೂಲೋತ್ಪಾಧನೆಯ ಗುರಿಗೆ ಬದ್ಧವಾಗಿಲ್ಲ.ವ್ಯಾಸುಲುರವರು ಈ ಬಗೆಯ ಕಾರ್ಯಕ್ರಮಗಳನ್ನು ಪರಿಹಾರತ್ಮಕ ಕಾರ್ಯಕ್ರಮವೆಂದು ಕರೆದಿದ್ದಾರೆ. ಈ ಬಗೆಯಕಾರ್ಯಕ್ರಮಗಳು ಬಡವರಿಗೆ,ಆಡಳಿತಗಾರರಿಗೆ ಹಾಗೂ ಅಧಿಕಾರಶಾಹಿಗೆ ತಕ್ಷಣದಲ್ಲಿ ಫಲಧಾಯಕವೆನಿಸಬಹುದು.ಆದರೆ ಇವು ಸ್ವಯಂ ಪೋಷಿತ ಕಾರ್ಯಕ್ರಮಗಳಾಗಲು ಸಾಧ್ಯವಿಲ್ಲ. (ವಿನೋದ್ ವ್ಯಾಸುಲು.೧೯೮೫. ಪು೨೬೪೬.೨೬೫೦).

ಯೋಜನೆ ಬಗ್ಗೆ ತಿಳುವಳಿಕೆ:

ಬಡತನ ನಿವಾರಣೆ ಕಾರ್ಯಕ್ರಮದ ಬಗ್ಗೆ ಇರುವ ಇನ್ನೊಂದು ಬಹುಮುಖ್ಯ ಟೀಕೆಯೆಂದರೆ ಅವುಗಳ ಬಗ್ಗೆ ಜನರಿಗೆಹೆಚ್ಚಿನ ಪರಿಜ್ಞಾನ ತಿಳುವಳಿಕೆ ಇಲ್ಲದಿರುವುದು. ಈ ಅಪರಿಪೂರ್ಣ ಮಾಹಿತಿಯಿಂದಾಗಿ ಈ ಯೋಜನೆಯು ಕೆಲವರವಶವಾಗಿರುವುದು ಕಂಡುಬರುತ್ತದೆ. ಸುಬ್ಬರಾಯಡು ಮತ್ತು ಇತರರು ನಡೆಸಿದ ಒಂದು ಅಧ್ಯಯನದಲ್ಲಿ ಈ ಬಗೆಯ ಅಪರಿಪೂರ್ಣ ಮಾಹಿತಿ ಸಮಸ್ಯೆಯನ್ನು ಗುರುತಿಸಲಾಗಿದೆ. ಈ ಯೋಜನೆಯಲ್ಲಿ ನೀಡಲಾಗುವ ನೆರವಿಗೆ ಅರ್ಹರಾದ ವ್ಯಕ್ತಿಗಳೆಲ್ಲರಿಗೂ ಇದರ ಬಗ್ಗೆ ತಿಳುವಳಿಕೆ ಇಲ್ಲ. ಈ ಅಪರಿಪೂರ್ಣ ಮಾಹಿತಿಯ ಪರಿಣಾಮವೆಂದರೆಭ್ರಷ್ಟಾಚಾರ, ಸ್ವಜನಪಕ್ಷಪಾತ ಇತ್ಯಾದಿ. (ಸುಬ್ಬರಾಯಡು ಮತ್ತು ಇತರರು.೧೯೯೧)

ಬಾಲಿಸ್ವರ್ ರವರು ನಡೆಸಿದ ಅಧ್ಯಯನದಲ್ಲಿ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯು ಈಗಾಗಲೆ ಗ್ರಾಮೀಣ ಪ್ರದೇಶದಲ್ಲಿರುವ ಏಕರೂಪಿ ರಚನೆಯನ್ನು ಕಾಯ್ದುಕೊಳ್ಳುವಲ್ಲಿ ಕ್ರಿಯಶೀಲವಾಗಿರುವುದು ಕಂಡುಬಂದಿದೆ. ಏಕೆಂದರೆಈ ಯೋಜನೆ ಆಶ್ರಯದಲ್ಲಿ ನೆರವು ಅತಿ ಹೆಚ್ಚಾಗಿ ಕೃಷಿ ಹಾಗೂ ಕೃಷಿ ಸಂಬಂಧಿ ಕಾರ್ಯಕ್ರಮಗಳಿಗೆ ಹರಿದುಹೋಗಿದೆ.ಕೃಷಿಯೇತರ ಚಟುವಟಿಕೆಗಳಿಗೆ ಹರಿದಿರುವುರು ಕಡಿಮೆ. ಹೀಗೆ ಏಕರೂಪಿ ಗ್ರಾಮೀಣ ರಚನೆಯನ್ನು ಕಾಯ್ದುಕೊಳ್ಳುವಲ್ಲಿ ಕ್ರಿಯಾಶೀಲವಾಗಿರುವ ಈ ಯೋಜನೆಯು ಸ್ವಯಂ ಪೋಷಿತವಾಗಲು ಸಾಧ್ಯವಿಲ್ಲ. ಕೃಷಿಯೇತರಚಟುವಟಿಕೆಗಳು ಹೆಚ್ಚಿನ ಪ್ರತಿಫಲ ನೀಡುವುದು ಅಧ್ಯಯನಗಳಿಂದ ತಿಳಿದು ಬಂದಿದೆ. ಆದರೆ ಅಂಥಹ ಚಟುವಟಿಕೆಗಳ ಕಡೆಗೆ ಈ ಯೋಜನೆ ಹೆಚ್ಚು ಹರಿಯುತ್ತಿಲ್ಲ. (ಬಾಲಿಸ್ವರ್ .೧೯೯೧.ಪು.೨೩೭-೨೪೩).

ಲಕ್ಷ್ಮಿದೇವಿಯವರ ಅಧ್ಯಯನದಲ್ಲೂ ಕೂಡ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯ ಆಶ್ರಯದಲ್ಲಿನ ಚಟುವಟಿಕೆಗಳು ಪ್ರಾಥಮಿಕ ವಲಯದಲ್ಲಿ ಕೇಂದ್ರೀಕೃತ ಗೊಂಡಿರುವುದು ಕಂಡುಬಂದಿದೆ. ಯೋಜನೆಗಳಿಂದ ಫಲಾನುಭವಿಗಳಿಗೆ ಹೆಚ್ಚು ಅನುಕೂಲವಾಗಿರುವುದು ಕಂಡುಬಂದಿದೆ. ಬಡತನದ ರೇಖೆಯಿಂದ ಮೇಲೆ ಫಲಾನುಭವಿಗಳುಚಲಿಸಿರುವುದನ್ನು ಈ ಅಧ್ಯಯನ ಗುರುತಿಸಿದೆ. ಈ ಅಧ್ಯಯನವು ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯಅನುಷ್ಠಾನದ ಹಂತದಲ್ಲಿ ಕಂಡುಬಂದ ಲೋಪ-ದೋಷಗಳನ್ನು ಗುರುತಿಸಿದೆ (ಲಕ್ಷ್ಮಿದೇವಿ.೧೯೯೬.ಪು.೩೦೦-೩೦೮).

ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆ ಮತ್ತು ಮಹಿಳೆಯರು:

ಸರ್ವೆ ಸಾಮಾನ್ಯವಾಗಿ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯ ಫಲಾನುಭಾವಿಗಳು ಹೆಚ್ಚಾಗಿ ಪುರುಷರಾಗಿರುತ್ತಾರೆ.ನಿಯಮದ ಪ್ರಕಾರ ಶೇ೩೫ರಷ್ಟು ಮಹಿಳೆಯರಿಗೆ ನೆರವು ನೀಡಬೇಕು. ಆದರೆ ಅನೇಕ ಸಂದರ್ಭಗಳಲ್ಲಿ ಇದುಸಾಧ್ಯವಾಗಿಲ್ಲ. ಘೋಷ್ .ಡಿ.ಕೆ.ಅವರು ಪಶ್ಚಿಮ ಬಂಗಾಳದಲ್ಲಿ ನಡೆಸಿದ ಅಧ್ಯಯನವು ಕೆಲವು ಆತಂಕಕಾರಿ ತಥ್ಯಗಳನ್ನು ಹೊರಹಾಕಿದೆ. ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯ ಆಶ್ರಯದಲ್ಲಿ ಫಲಾನುಭವಿಗಳ ವರಮಾನದ ಪ್ರಮಾಣ ಅಧಿಕ ಗೊಂಡಿದ್ದರೂ ಸಹ ಮಹಿಳೆಯರಿಗೆ ತಮ್ಮ ವರಮಾನದ ಮೇಲೆ ಯಾವುದೇ ನಿಯಂತ್ರಣವಿರುವುದಿಲ್ಲ.ವರಮಾನವನ್ನು ವ್ಯಯಿಸುವ ಹಕ್ಕು ಅವರಿಗಿರುವುದಿಲ್ಲ. ಈ ಅಧ್ಯಯನದಲ್ಲಿ ಆಯ್ಕೆಮಾಡಿಕೊಂಡಿದ್ದ ೨೪೦ ಮಹಿಳೆಯರಲ್ಲಿ ೧೭೧ ಮಹಿಳೆಯರಿಗೆ ವರಮಾನದ ಬಗ್ಗೆ ಯಾವುದೇ ನಿರ್ಧಾರ ತೆಗೆದುಕೊಳ್ಳುವ ಅಧಿಕಾರ ವಿರಲಿಲ್ಲ. ಈ ಯೋಜನೆಯಿಂದಾಗಿ ವರಮಾನ ಕುರಿತಂತೆ ವ್ಯಯಿಸುವ ಹಕ್ಕು ಹೆಚ್ಚು ಮಹಿಳೆಯರಿಗೆ ಪ್ರಾಪ್ತವಾಗಿರುವುದು ಕಂಡುಬಂದಿದೆ. ಯೋಜನೆಯ ಪೂರ್ವದಲ್ಲಿ ವರಮಾನದ ಮೇಲೆ ಅಧಿಕಾರವುಳ್ಳ ಮಹಿಳೆಯರ ಸಂಖ್ಯೆ ೬೯. ಆದರೆ ಯೋಜನೆ ನಂತರ ಇವರ ಸಂಖ್ಯೆ ೮೩ಕ್ಕೆ ಏರಿದೆ.

ಆದರೆ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆ ಆಶ್ರಯದಲ್ಲಿ ನೆರವು ಪಡೆದನಂತರ ಮಹಿಳೆಯರ ದುಡಿಮೆ ಕಾಲಾವಧಿ ಅಧಿಕಗೊಂಡಿದೆ. ಹಾಗೂ ವಿರಾಮದ ಕಾಲವಧಿ ಕಡಿಮೆಯಾಗಿದೆ. ಮಹಿಳೆಯರ ದುಡಿಮೆ ಕಾಲಾವಧಿ ಯೋಜನೆ ಪೂರ್ವದಲ್ಲಿ ದಿನಕ್ಕೆ ೧೫.೪೫ ಗಂಟೆಗಳಾಗಿದ್ದರೆ ಯೋಜನಾ ನಂತರ ಅದು ೧೬.೮೧ಕ್ಕೆ ಏರಿದೆ.ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಅಭಿವೃದ್ಧಿ ಕಾರ್ಯಕ್ರಮಗಳು ಹೇಗೆ ಲಿಂಗ ತಾರತಮ್ಯ ಸೃಷ್ಟಿಸುತ್ತವೆ ಎಂಬುದಕ್ಕೆ ಇದು ಸಾಕ್ಷಿಯಾಗಿದೆ (ಘೋಷ್ .ಡಿ.ಕೆ.೧೯೯೩).

ಅಮರ್ ಚಂದ್ ಕೌಶಿಕ್ ರವರು ಹರಿಯಾಣದ ಕೆಲವು ಜಿಲ್ಲೆಗಳಲ್ಲಿ ನಡೆಸಿದ ಅಧ್ಯಯನದಲ್ಲಿ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯಿಂದ ಫಲಾನುಭವಿಗಳ ವರಮಾನದಲ್ಲಿ ಉಂಟಾದ ಬದಲಾವಣೆಗಳನ್ನು ಗುರುತಿಸಿದ್ದಾರೆ. ಯಾವ ಫಲಾನುಭವಿಗಳ ಬಂಡವಾಳ ಹಾಗೂ ತಂತ್ರಜ್ಞಾನಗಳ ಮಟ್ಟ ಉತ್ತಮವಾಗಿರುತ್ತದೊ ಅಂಥವರ ವರಮಾನದ ಮಟ್ಟ ತೀವ್ರ ಏರಿಕೆಯಾಗಿದೆ. ಈ ವ್ಯತ್ಯಯವನ್ನು ಸರಿಪಡಿಸುವ ಕ್ರಮ ಎಲ್ಲೂ ಕಾಣಬರುತ್ತಿಲ್ಲ (ಕೌಶಿಕ್ .ಎ.ಸಿ.೧೯೯೩).

ಅನೇಕ ಅಧ್ಯಯನಗಳು ಫಲಾನುಭವಿಗಳ ಆಯ್ಕೆಗೆ ಸಂಬಂಧಿಸಿದಂತೆ ಯೋಜನೆಯಲ್ಲಿರುವ ನಿಬಂಧನೆಗಳು ಹಾಗೂವಾಸ್ತವದಲ್ಲಿ ಆಯ್ಕೆ ಮಾಡುವ ವಿಧಾನದಲ್ಲಿರುವ ವ್ಯತ್ಯಯವನ್ನು ಗುರುತಿಸಿದ್ದಾವೆ. ಈ ಅಧ್ಯಯನಗಳ

ಸಮೀಕ್ಷೆಯಆಧಾರದಿಂದ ನಾವು ನಮ್ಮ ಅಧ್ಯಯನ ವಿಷಯದಲ್ಲಿ ಪ್ರಕ್ರಿಯೆ ಹಾಗೂ ಪರಿಣಾಮಗಳ ಅಂಶಗಳನ್ನು ಸಮನ್ವಯಗೊಳಿಸಲು ಪ್ರಯತ್ನಿಸಿದ್ದೇವೆ.

**೧.೮ ಅಧ್ಯಾಯಗಳ ಯೋಜನೆ:**

ಅಧ್ಯಾಯ ಒಂದರಲ್ಲಿ ಪ್ರಸ್ತಾವನೆ, ಅಧ್ಯಯನದ ಉದ್ದೇಶ, ಮಹತ್ವ, ಅಧ್ಯಯನದ ವಿಧಾನ ಮತ್ತು ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯ ಬಗ್ಗೆ ಸಂಕ್ಷಿಪ್ತ ಮಾಹಿತಿಯನ್ನು ವಿವರಿಸಲಾಗಿದೆ.

ಎರಡನೆ ಅಧ್ಯಾಯದಲ್ಲಿ ಅಧ್ಯಯನ ಕ್ಷೇತ್ರಕ್ಕೆ ಸಂಬಂಧಿಸಿದಂತೆ ತಾಲ್ಲೂಕಿನ ಉದ್ಯೋಗದ ರಚನೆ, ಭೌಗೋಳಿಕ ಲಕ್ಷಣಗಳು, ಫಲಾನುಭವಿಗಳ ಸಾಮಾಜಿಕ ಮತ್ತು ಆರ್ಥಿಕ ಜೀವನವನ್ನು ವಿವರಿಸಲಾಗಿದೆ.

ಮೂರನೆ ಅಧ್ಯಾಯದಲ್ಲಿ ಯೋಜನೆಯ ಪ್ರಕ್ರಿಯೆ ಮತ್ತು ಪರಿಣಾಮಗಳನ್ನು ಹಲವಾರು ವಿಧಾನಗಳಿಂದ ವಿವರಿಸಲು ಪ್ರಯತ್ನಿಸಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಯೋಜನೆಯ ಒಟ್ಟಾರೆಯ ತಾತ್ಪರ್ಯವನ್ನು ಹೇಳಲಾಗಿದೆ.

ಐದನೆಯ ಮತ್ತು ಕೊನೆಯ ಅಧ್ಯಾಯದಲ್ಲಿ ನಮ್ಮ ಅಧ್ಯಯನದ ಸಾರಾಂಶ ಹಾಗೂ ಸಲಹೆ ಸೂಚನೆಗಳನ್ನು ನೀಡಿದೆ.

## ಅಧ್ಯಾಯ ೨

### ೨.೦ ಅಧ್ಯಯನ ಕ್ಷೇತ್ರ: ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಪಕ್ಷಿನೋಟ:

ಹಗರಿಬೊಮ್ಮನಹಳ್ಳಿ ಬಳ್ಳಾರಿ ಜಿಲ್ಲೆಯ ಒಂದು ತಾಲ್ಲೂಕು ಮತ್ತು ಆ ತಾಲ್ಲೂಕಿನ ಆಡಳಿತ ಕೇಂದ್ರ. ಈ ತಾಲ್ಲೂಕು ೧೯೭೩ರಲ್ಲಿ ಅಸ್ತಿತ್ವದಲ್ಲಿ ಬಂದಿತು. ಈ ತಾಲ್ಲೂಕನ್ನು ಉತ್ತರದಲ್ಲಿ ರಾಯಚೂರು ಜಿಲ್ಲೆ ಪೂರ್ವದಲ್ಲಿ ಹೊಸಪೇಟೆ ಮತ್ತು ಕೂಡ್ಲಿಗಿ ತಾಲ್ಲೂಕುಗಳು, ದಕ್ಷಿಣದಲ್ಲಿ ಹರಪನಹಳ್ಳಿ ತಾಲ್ಲೂಕು,ಪಶ್ಚಿಮದಲ್ಲಿ ಹಡಗಲಿ ತಾಲ್ಲೂಕು ಸುತ್ತುವರಿದಿವೆ. ತಾಲ್ಲೂಕಿನ ಉತ್ತರದಲ್ಲಿ ತುಂಗಭದ್ರಾ ನದಿ ಮತ್ತು ತುಂಗಭದ್ರಾ ಜಲಾಶಯದ ಹಿನ್ನೀರು ಹರಡಿದ್ದು ತಾಲ್ಲೂಕು ಗಡಿಯಾಗಿ ರಾಯಚೂರು ಜಿಲ್ಲೆಯನ್ನು ಈ ತಾಲ್ಲೂಕಿನಿಂದ ಬೇರ್ಪಡಿಸಿದೆ. ಚಿಕ್ಕಹಗರಿ ಈ ತಾಲ್ಲೂಕಿನ ಮುಖ್ಯ ನದಿ.ಹೊಳೆಯು ದಕ್ಷಿಣದಿಂದ ಉತ್ತರಾಭಿಮುಖವಾಗಿ ಹರಿದು ತುಂಗಭದ್ರಾ ನದಿಯನ್ನು ಸೇರಿಕೊಳ್ಳುತ್ತದೆ. ತಾಲ್ಲೂಕಿನಲ್ಲಿ ಕೆಂಪು ಮಣ್ಣಿನಭೂಮಿ ಹೆಚ್ಚು ಇರುವುದು ಕಂಡುಬರುತ್ತಿದೆ.

ಸಾಮಾನ್ಯ ಮಳೆಯಾಗುವ ಈ ತಾಲ್ಲೂಕಿನ ವ್ಯವಸಾಯಕ್ಕೆ ಅನುಕೂಲವಾಗಲು ಚಿಕ್ಕಹಗರಿ ನದಿಗೆ ಹಗರಿಬೊಮ್ಮನಹಳ್ಳಿಯಿಂದ ದಕ್ಷಿಣಕ್ಕೆ ನಾಲ್ಕು ಕಿ.ಮೀ. ದೂರದಲ್ಲಿ ಮಾಲವಿಯ ನೈರುತ್ಯಕ್ಕೆ ಸುಮಾರು ಅರ್ಧಮೈಲಿ ದೂರದಲ್ಲಿ ೨೫೦ ಲಕ್ಷ ರೂಪಾಯಿ ವೆಚ್ಚದ ಕಟ್ಟೆಕಟ್ಟಿ ಹಗರಿಬೊಮ್ಮನಹಳ್ಳಿ ಜಲಾಶಯವನ್ನು ನಿರ್ಮಿಸಲಾಗಿದೆ. ಈ ಜಲಾಶಯ ಎರಡು ನಾಲೆಗಳಿಂದ ಸುಮಾರು ೭೩೫೦ ಎಕರೆಗಳಿಗೆ ನೀರೋದಿಗಿಸಲಾಗಿದೆ. (ಕನ್ನಡ ವಿಷಯ ವಿಶ್ವಕೋಶ: ೧೯೭೯, ಪುಟ- ೧೫೫೫). ಈ ತಾಲ್ಲೂಕಿನಲ್ಲಿ ಕೆಂಪು ಮತ್ತು ಕಪ್ಪು ಮಣ್ಣಿನ ಭೂಮಿ ಇದ್ದು ಜೋಳ,ಶೇಂಗ, ಸೂರ್ಯಕಾಂತಿ, ಬತ್ತ, ಸಜ್ಜೆ ಮೆಣಸಿನಕಾಯಿ ಹೆಚ್ಚಾಗಿ ಬೆಳೆಯುತ್ತಿದ್ದಾರೆ.

ಕೃಷಿಯ ಜೊತೆಗೆ ಈ ತಾಲ್ಲೂಕಿನಲ್ಲಿ ಪಶುಪಾಲನೆ ಹಾಗೂ ಮತ್ಸ್ಯೋದ್ಯಮಗಳಿವೆ. ಪಶುಪಾಲನೆ ಕೆಲವು ವರ್ಷಗಳಿಂದ ಅಭಿವೃದ್ಧಿಯ ಪಥದಲ್ಲಿದೆ. ಈ ತಾಲ್ಲೂಕಿನಲ್ಲಿ ಅನೇಕ ಎಣ್ಣೆ ಗಿರಣಿಗಳಿದ್ದು ಖಾದ್ಯತೈಲ ಉತ್ಪಾದನೆ ಇಲ್ಲಿ ಒಂದುಮುಖ್ಯ ಕೈಗಾರಿಕೆ. ಈ ಕೈಗಾರಿಕೆಗಳಿಗೆ ಬೇಕಾಗುವ ಎಣ್ಣೆ ಕಾಳುಗಳ ಉತ್ಪಾದನೆ ಈ ತಾಲ್ಲೂಕಿನಲ್ಲಿ ಅಧಿಕ. ತಾಲ್ಲೂಕಿನ ಉತ್ತರ ಭಾಗದಲ್ಲಿ ಮತ್ತು ಪಶ್ಚಿಮಕ್ಕೆ ತುಂಗಭದ್ರಾ ನದಿಯ ಹಿನ್ನೀರು ನಿಲ್ಲುವುದರಿಂದ ವ್ಯವಸಾಯಕ್ಕೆ ಅನುಕೂಲವಾಗಿದೆ. ಈ ಪ್ರದೇಶದಲ್ಲಿ ಏತನೀರಾವರಿ ಯೋಜನೆಗಳು ಕಾರ್ಯ ನಿರ್ವಹಿಸುತ್ತಿರುವುದರಿಂದ ನದಿಯ ದಡದಲ್ಲಿರುವ ಗ್ರಾಮಗಳು ವ್ಯವಸಾಯದಿಂದ ಅನುಕೂಲವಾಗಿದೆ.

### ೨.೧ ಆಡಳಿತದ ರಚನೆ(Administrative setup)

ಹಗರಿಬೊಮ್ಮನಹಳ್ಳಿ ಮೊದಲು ಹಡಗಲಿ ತಾಲ್ಲೂಕಿನ ಒಂದು ಹೋಬಳಿ ಕೇಂದ್ರವಾಗಿತ್ತು. ಅನಂತರ ಕೂಡ್ಲಿಗಿ ತಾಲ್ಲೂಕಿನಿಂದ ೧೩ ಗ್ರಾಮಗಳನ್ನು, ಹಡಗಲಿ ತಾಲ್ಲೂಕಿನಿಂದ ೨೨ ಗ್ರಾಮಗಳನ್ನು ಮತ್ತು ಮಲ್ಲಾಪುರ ತಾಲ್ಲೂಕಿನಿಂದ ೨೦ ಗ್ರಾಮಗಳನ್ನು ತೆಗೆದುಕೊಂಡು, ಮಲ್ಲಾಪುರ ತಾಲ್ಲೂಕಿನ ಬದಲು ಹಗರಿಬೊಮ್ಮನಹಳ್ಳಿಯನ್ನು ಕೇಂದ್ರವಾಗುಳ್ಳ ಈ ತಾಲ್ಲೂಕನ್ನು ರಚಿಸಲಾಯಿತು. ಈ ತಾಲ್ಲೂಕು ನಾಲ್ಕು ಕಂದಾಯ ಹೋಬಳಿಗಳನ್ನು ಹೊಂದಿದ್ದು ಅವು ಈ ರೀತಿ ಇವೆ. ೧. ಹಗರಿಬೊಮ್ಮನಹಳ್ಳಿ, ೨.ತಂಬ್ರಹಳ್ಳಿ, ೩.ಹಂಪಸಾಗರ, ೪.ಕೋಗಳಿ. ಒಟ್ಟು ಐವತ್ತೈದು ಗ್ರಾಮಗಳನ್ನುಹೊಂದಿದೆ. ಇದರಲ್ಲಿ ಐವತ್ತೆರಡು ಗ್ರಾಮಗಳು ಜನವಸತಿಯಿಂದ ಕೂಡಿದ್ದೂ, ಮೂರು ಗ್ರಾಮಗಳಲ್ಲಿ ಜನವಸತಿ ಇರುವುದಿಲ್ಲ. (ಜಿಲ್ಲಾ ಅಂಕಿ ಅಂಶಗಳ ನೋಟ ೯೫-೯೬,ಪುಟ೧).

ಹಗರಿಬೊಮ್ಮನಹಳ್ಳಿ ತಾಲ್ಲೂಕು ಹೈದ್ರಾಬಾದ್ -ಕರ್ನಾಟಕ ಅಭಿವೃದ್ಧಿಯೋಜನೆಯಡಿಯಲ್ಲಿ ಬರುವುದರಿಂದ ತಾಲ್ಲೂಕಿನಲ್ಲಿಯೋಜನೆಯು ಕಾರ್ಯನುಷ್ಠಾನದಲ್ಲಿದೆ. ಹಾಗೂ ಜಿಲ್ಲಾಪಂಚಾಯಿತಿಯ ಯೋಜನೆಗಳು ಜಾರಿಯಲ್ಲಿವೆ.(Industrialisation socio Economic Externalities: Page ೨೦). ಹಗರಿಬೊಮ್ಮನಹಳ್ಳಿ ತಾಲ್ಲೂಕು ಹೊಸಪೇಟೆ ಕಂದಾಯ ಉಪವಿಭಾಗಕ್ಕೆ (District revenue Sub Division) ಸೇರಿದ್ದಾಗಿದೆ.

### ೨.೨ ರಾಜಕೀಯ ವ್ಯವಸ್ಥೆ

ಹಗರಿಬೊಮ್ಮನಹಳ್ಳಿ ತಾಲ್ಲೂಕಿಗೆ ತನ್ನದೇ ಆದ ವಿಧಾನಸಭಾ ಕ್ಷೇತ್ರವಿಲ್ಲ. ಈ ತಾಲ್ಲೂಕು ಕೂಡ್ಲಿಗಿ ವಿಧಾನಸಭಾ ವ್ಯಾಪ್ತಿಯೊಳಗೆ ಬರುತ್ತದೆ. ತನ್ನದೇ ಆದ ವಿಧಾನ ಸಭಾ ಕ್ಷೇತ್ರ ಇಲ್ಲದೆ ಇರುವುದರಿಂದ ತಾಲ್ಲೂಕಿನ ಅಭಿವೃದ್ಧಿ ಕುಂಠಿತಗೊಂಡಿದೆ ಎಂಬ ಕೂಗು ಸಹ ಕೇಳಿಬರುತ್ತದೆ. ತಾಲ್ಲೂಕಿನಲ್ಲಿ ಪಂಚಾಯಿತ್ ರಾಜ್ ವ್ಯವಸ್ಥೆ ಅಸ್ತಿತ್ವದಲ್ಲಿರುತ್ತದೆ. ಈ ತಾಲ್ಲೂಕು ನಾಲ್ಕು ಜಿಲ್ಲಾ ಪಂಚಾಯಿತಿಯ ಕ್ಷೇತ್ರಗಳನ್ನು ಹೊಂದಿರುತ್ತದೆ. ಮೂರು ಪುರುಷ ಸದಸ್ಯ ಕ್ಷೇತ್ರ ಮತ್ತು ಒಂದುಮಹಿಳಾ ಮೀಸಲು ಕ್ಷೇತ್ರವಿರುತ್ತದೆ.

ತಾಲ್ಲೂಕು ಪಂಚಾಯಿತಿ ಸಮಿತಿಯಲ್ಲಿ ಒಟ್ಟು ಹದಿನಾಲ್ಕು ಸದಸ್ಯರು ಇರುತ್ತಾರೆ. ಇದು ಹತ್ತು ಪುರುಷ ಸದಸ್ಯರು ಮತ್ತು ನಾಲ್ಕು ಮಹಿಳಾ ಸದಸ್ಯರನ್ನು ಒಳಗೊಂಡಿದೆ. ತಾಲ್ಲೂಕಿನಲ್ಲಿ ಇಪ್ಪತ್ತೆರಡು ಗ್ರಾಮ

ಪಂಚಾಯಿತಿಗಳಿವೆ. ಇಲ್ಲಿಯೂ ಸಹಾ ಮೀಸಲಾತಿಗನುಗುಣವಾಗಿ ಮಹಿಳಾ ಸದಸ್ಯ ಮತ್ತು ಅಧ್ಯಕ್ಷರುಗಳು ಇರುತ್ತಾರೆ.

**೨.೩ ವಿಸ್ತೀರ್ಣ ಮತ್ತು ಜನಸಂಖ್ಯೆ (Area and Population):**

ಈ ತಾಲ್ಲೂಕು ೯೭೩.೯೨ ಚ.ಕಿ.ಮೀ ಹೊಂದಿದೆ. (District censes Hand Book:೧೯೯೧ Page ೪೦) ವಿಸ್ತೀರ್ಣದದೃಷ್ಟಿಯಿಂದ ಜಿಲ್ಲೆಯಲ್ಲಿ ಇದು ಏಳನೇ ಸ್ಥಾನದಲ್ಲಿದೆ. (ವಿವಿಧ ಗ್ರಂಥಗಳಲ್ಲಿ ವಿಸ್ತೀರ್ಣದ ಬಗ್ಗೆ ಎಂಟು,ಹತ್ತು ಕಿ.ಮೀ ವ್ಯತ್ಯಾಸ ಕಂಡುಬರುತ್ತದೆ.) ೧೯೯೧ರ ಜನಗಣತಿಯಲ್ಲಿ ಈ ತಾಲ್ಲೂಕುನ್ನು ಗ್ರಾಮೀಣ ಪ್ರದೇಶವೆಂದು ವರ್ಗೀಕರಿಸಲಾಗಿದೆ. ಏಕೆಂದರೆ ಈ ತಾಲ್ಲೂಕಿನಲ್ಲಿ ಯಾವುದೇ ಪಟ್ಟಣವಿರುವುದಿಲ್ಲ. ಒಟ್ಟು ಜನಸಂಖ್ಯೆಯಲ್ಲಿ ಪುರುಷರು೬೭,೪೯೩ (ಶೇ ೫೦.೨೮)ಮತ್ತು ಮಹಿಳೆಯರು ೬೭೧೩೩ (ಶೇ ೪೯.೭೧) ಪ್ರಮಾಣದಲ್ಲಿ ಇದ್ದಾರೆ. ಲಿಂಗ ಪರಿಮಾಣದಲ್ಲಿ ಅಷ್ಟೇನು ವ್ಯತ್ಯಾಸ ಕಂಡುಬರುತ್ತಿಲ್ಲ. ಪ್ರತಿ ಸಾವಿರ ಪುರುಷರಿಗೆ ೯೭೧ ಜನ ಸ್ತ್ರೀಯರಿದ್ದಾರೆ. ಪರಿಶಿಷ್ಟ ಜಾತಿಯವರ ಒಟ್ಟು ಜನಸಂಖ್ಯೆ೫೦೨೮. ಇವರು ಒಟ್ಟು ಜನಸಂಖ್ಯೆಯಲ್ಲಿ ೧೮.೫೩೧ ಇದ್ದಾರೆ.ಪರಿಶಿಷ್ಟ ಪಂಗಡದವರ ಜನಸಂಖ್ಯೆ ೧೨೧೦.ಇವರು ಒಟ್ಟು ಜನಸಂಖ್ಯಯಲ್ಲಿ ಶೇ ೦.೪೯.ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಸಾಕ್ಷರತೆಯ ಪ್ರಮಾಣ ಒಟ್ಟು ಜನಸಂಖ್ಯೆಯಲ್ಲಿ ಶೇಕಡ ೩೭.೦೪. ಸಾಕ್ಷರತೆಯ ದೃಷ್ಟಿಯಿಂದ ಜಿಲ್ಲೆಯಲ್ಲಿ ಇದು ನಾಲ್ಕನೇ ಸ್ಥಾನದಲ್ಲಿದೆ. ಒಟ್ಟು ಜನಸಂಖ್ಯೆಯಲ್ಲಿ ಸಾಕ್ಷರರು ಕೇವಲ ೫೦೦೨೬. ಇವರೆಲ್ಲಿ ಪುರುಷ ಸಾಕ್ಷರರು ೩೩೦೪೮. ಇವರ ಪ್ರಮಾಣ ಒಟ್ಟು ಜನಸಂಖ್ಯೆಯಲ್ಲಿ ಶೇ ೨೪.೪೭ ಇದೆ. ಒಟ್ಟು ಸಾಕ್ಷರರಲ್ಲಿ ಪುರುಷರು ಶೇ ೬೬.೦೬ರಷ್ಟುದ್ದಾರೆ. ಮಹಿಳಾ ಸಾಕ್ಷರರು ೧೬೯೭೮ ಇದ್ದು ಒಟ್ಟು ಜನಸಂಖ್ಯೆಯಲ್ಲಿ ಶೇ ೧೨.೫೭ ಮಾತ್ರ. ಒಟ್ಟು ಸಾಕ್ಷರರಲ್ಲಿ ಮಹಿಳೆಯರ ಪ್ರಮಾಣ ೩೩.೯೩.

ಮಹಿಳೆಯರು ಹಾಗೂ ಪುರುರಷರ ನಡುವಿನ ಸಾಕ್ಷರತೆಯ ಅಂತರ ಶೇ ೩೨.೧೩ ರಷ್ಟಿದೆ. ಈ ರೀತಿಯಲ್ಲಿ ಪುರುಷಮಹಿಳೆಯರ ನಡುವಿನ ಸಾಕ್ಷರತೆಯ ಪ್ರಮಾಣ ಅಗಾಧ ರೀತಿಯಲ್ಲಿ ವ್ಯತ್ಯಾಸವಿರುವುದು ಗೋಚರಿಸುತ್ತದೆ. ಎಲ್ಲಾವಿವರಗಳನ್ನು ಕೊಷ್ಟಕದಲ್ಲಿ ವಿವರವಾಗಿ ತಿಳಿದುಕೊಳ್ಳಬಹುದು. ಜನ ಸಾಂದ್ರತೆ

ಪ್ರತಿ ಚ.ಕಿ.ಮೀಗೆ ೧೩೮ಇದ್ದು, ಜನಸಂಖ್ಯೆಯ ದಶಕದ ಬೆಳವಣಿಗೆ ಪ್ರಮಾಣ ಶೇ ೩೬. ಜಿಲ್ಲೆಯಲ್ಲಿ ಪ್ರಥಮ ಸ್ಥಾನದಲ್ಲಿದೆ.

ಕೋಷ್ಟಕ ೨.೧ ಜನಸಂಖ್ಯೆ ಮತ್ತು ವಿಸ್ತೀರ್ಣದ ವಿವರ:

| ಕ್ರ.ಸಂ. | ವಿವರ | ಒಟ್ಟು | ಶೇಕಡವಾರು |
|---|---|---|---|
| ೧ | ವಿಸ್ತೀರ್ಣ | ೯೭೩.೯೨ (ಚ.ಕಿ.ಮೀ) | |
| ೨ | ಕುಟುಂಬಗಳ ಸಂಖ್ಯೆ. (No.of house holds) | ೨೨೪೪೦ | |
| ೩ | ಒಟ್ಟು ಜನಸಂಖ್ಯೆ<br>ಅ. ಪುರುಷರು<br>ಬ. ಮಹಿಳೆಯರು | ೧,೩೫,೦೨೬<br>೬೭,೮೯೩<br>೬೭೧೩೩ | <br>(೫೦.೨೮)<br>(೪೯.೭೧) |
| ೪ | ಪರಿಶಿಷ್ಟ ಜಾತಿಯವರು | ೨೫೦೨೮ | (೧೮.೫೩) |
| ೫ | ಪರಿಶಿಷ್ಟ ಪಂಗಡದವರು | ೧೨೧೦ | (೦.೮೯) |
| ೬ | ಒಟ್ಟು ಸಾಕ್ಷರರು | ೫೦೦೨೬ | (೩೭.೦೪) |
| | ಅ.ಪುರುಷ ಸಾಕ್ಷರರು<br><br>ಬ. ಮಹಿಳಾ ಸಾಕ್ಷರರು | ೩೩೦೪೮<br><br>೧೬೯೭೮ | (೨೪.೪೭) (೬೬.೦೬)<br><br>(೧೨.೫೭) (೩೩.೯೩) |

ಮೂಲ:ಜಿಲ್ಲಾ ಅಂಕಿ ಅಂಶಗಳ ನೋಟ ೧೯೯೫

**೨.೪ ತಾಲ್ಲೂಕಿನ ಆರ್ಥಿಕ ವ್ಯವಸ್ಥೆ: ಒಟ್ಟು ಶ್ರಮಶಕ್ತಿ (Structure of the Taluks Economy and Work force):**

ಪ್ರಸ್ತುತ ಅಧ್ಯಯನ ಕ್ಷೇತ್ರವಾದ ಹಗರಿಬೊಮ್ಮನಹಳ್ಳಿ ತಾಲ್ಲೂಕಿನಲ್ಲಿ ವ್ಯವಸಾಯ ಪ್ರದಾನವಾದ ಉದ್ಯೋಗವಾಗಿದೆ. ಒಟ್ಟುಭೌಗೋಳಿಕ ವಿಸ್ತೀರ್ಣದಲ್ಲಿ ಬಿತ್ತನೆಯಾಗಿರುವ ಪ್ರದೇಶ ೪೪೧೭೬ ಹೆಕ್ಟೇರ್ (ಜಿಲ್ಲಾ ಅಂಕಿ ಅಂಶಗಳ ನೋಟ ೧೯೯೫).ಒಟ್ಟು ವಿಸ್ತೀರ್ಣದಲ್ಲಿ ೨೫'೧೨೭ ಹೆಕ್ಟೇರ್ ಪ್ರದೇಶವು ಸಾಗುವಳಿಗೆ ಯೋಗ್ಯವಲ್ಲದ (ಬಂಜರು) ಭೂಮಿಯಾಗಿದೆ. ೪೯೮೯ ಹೆಕ್ಟೇರ್ ಪಾಳುಭೂಮಿಯನ್ನು ಸಾಗು ಮಾಡಲಾಗಿದೆ. ೧೧೦೨೭ ಹೆಕ್ಟೇರ್ ಭೂಮಿಯನ್ನು ಒಂದಕ್ಕಿಂತ ಹೆಚ್ಚುಬಾರಿ ಬಿತ್ತನೆ ಮಾಡಲಾಗಿದೆ.

೧೯೯೧ ರ ಜನಗಣತಿ ಪ್ರಕಾರ ತಾಲ್ಲೂಕಿನ ಜನಸಂಖ್ಯೆ ೧,೩೫,೦೨೬. ಇವರಲ್ಲಿ ೬೦,೭೮೧ ಜನರು ಮಾತ್ರ ದುಡಿಯುವ ವರ್ಗವಾಗಿದ್ದಾರೆ. ಅಂದರೆ ಒಟ್ಟಾರೆಯಾಗಿ ತಾಲ್ಲೂಕಿನ ಶ್ರಮ ಶಕ್ತಿ ಶೇ ೪೫.೦೧ ರಷ್ಟಿದ್ದು ಒಟ್ಟು ಶ್ರಮ ಶಕ್ತಿಯಲ್ಲಿ ೫೧,೬೭೪ (ಶೇ ೮೫) ಜನರು ಕೃಷಿ ಮತ್ತು ಕೃಷಿ ಅವಲಂಬಿತ ಶ್ರಮಿಕರಾಗಿದ್ದಾರೆ. ಒಟ್ಟು ಶ್ರಮ ಶಕ್ತಿಯ ಅತಿ ಹೆಚ್ಚು ಭಾಗ ವ್ಯವಸಾಯ (ಪ್ರಾಥಮಿಕ) ರಂಗದಲ್ಲೇ ನಿರತವಾಗಿದೆ. (ಶೇ ೮೫).

..ಈ ಎಲ್ಲ ಕೆಲಸಗಳಿಗೆ ಶ್ರಮ ಯಾವ ರೀತಿಯಲ್ಲಿದೆ ಎಂಬುದನ್ನು ಕೋಷ್ಟಕ೨.೨ರಲ್ಲಿ ನೊಡಬಹದು.

ಕೋಷ್ಟಕ ೨.೨: ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಶ್ರಮಶಕ್ತಿ ವಿವರಗಳು:

| ಕ್ರ.ಸಂ | ವಿವರಗಳು | ಒಟ್ಟು | ಶೇಕಡ |
|---|---|---|---|
| ೧ | ಒಟ್ಟು ಶ್ರಮ ಶಕ್ತಿ | ೬೦೭೮೧ | (೪೫.೦೧) |
| ೨ | ಕೃಷಿ ಅವಲಂಬಿತ ಶ್ರಮಶಕ್ತಿ | ೫೧೬೭೪ | (೮೫.೦೦) |
| | ಅ ಸಾಗುವಳಿದಾರರು | ೨೪೭೯೭ | (೪೦.೨೯) |
| | ಬ ಕೃಷಿ ಕಾರ್ಮಿಕರು | ೨೬೮೭೭ | (೪೪.೨೧) |
| ೩ | ಹೈನುಗಾರಿಕೆ ತೋಟಗಾರಿಕೆ,ಬೇಟೆ, ಮೀನುಗಾರಿಕೆ ಮುಂತಾದವು | ೭೯೨ | (೧.೩೦) |
| ೪ | ಗಣಿಗಾರಿಕೆ | ೮೮ | (೦೧೪) |
| ೫ | ಕರಕುಶಲ ಮತ್ತು ಗುಡಿ ಕೈಗಾರಿಕೆ ಹಾಗೂ ರಿಪೇರಿ | ೨೨೬೨ | (೩.೭೨) |
| ೬ | ಮನೆನಿರ್ಮಾಣ (ಭೂಮಿಕೆಲಸ) | ೫೨೭ | (೦.೮೬) |
| ೭ | ವ್ಯಾಪಾರ ಮತ್ತು ವಾಣಿಜ್ಯ | ೨೭೬೩ | (೪.೫೪) |
| ೮ | ಸಾರಿಗೆ ಉಗ್ರಾಣ ಸಂಪರ್ಕ | ೩೭೨ | (೦.೦೧) |
| ೯ | ಇತರೆ | ೨೩೦೩ | (೩.೭೮) |

(ಆವರಣದಲ್ಲಿರುವ ಸಂಖ್ಯೆಗಳು ಒಟ್ಟು ಜನಸಂಖ್ಯೆಯಲ್ಲಿನ ಶೇಕಡವಾರು.
ಮೂಲ: District Census Hand Book,೧೯೯೧.ಪುಟ ೪೦.)

ಹಗರಿಬೊಮ್ಮನಹಳ್ಳಿ ತಾಲ್ಲೂಕು ಕೃಷಿ ಪ್ರಧಾನ ಆರ್ಥಿಕತೆಯಾಗಿದೆ. ಹಗರಿಬೊಮ್ಮನಹಳ್ಳಿ ತಾಲ್ಲೂಕು ಏಕರೂಪ ಆರ್ಥಿಕ ರಚನೆಯನ್ನು ಹೊಂದಿದೆ. ಏಕರೂಪಿ ಆರ್ಥಿಕ ರಚನೆಯೆಂದರೆ ಒಂದೇ ವೃತ್ತಿ ಅತಿ ಪ್ರಧಾನ ವಾದ ಆರ್ಥಿಕತೆ. ಇದರಿಂದ ಉಳಿದ (ರಂಗದಲ್ಲಿ) ಕ್ಷೇತ್ರಗಳಲ್ಲಿ ಶ್ರಮದ ವಿಂಗಡನೆ ಕಡಿಮೆ ಇದೆ ಎಂದು ಮೇಲ್ನೊಟಕ್ಕೆ ಗೊತ್ತಾಗುತ್ತದೆ. ಕೃಷಿ ಅವಲಂಬಿತ ಶ್ರಮಶಕ್ತಿಯಲ್ಲಿ ಸಾಗುವಳಿದಾರರು ೨೪೭೯೭. ಅಂದರೆ ಶೇ ೪೦.೭೯ ಸಣ್ಣ,ಅತಿಸಣ್ಣ, ಮಧ್ಯಮ ಮತ್ತು ದೊಡ್ಡಗಾತ್ರದ ಭೂಹಿಡುವಳಿಗಳನ್ನು ಶೇ ೪೦.೭೯ ಜನರು ಮಾತ್ರ ಸಾಗು ಮಾಡುತ್ತಿದ್ದಾರೆ ಎಂದು ತಿಳಿಯುತ್ತದೆ.

ಒಟ್ಟು ಶ್ರಮ ಶಕ್ತಿಯಲ್ಲಿ ಕೃಷಿ ಕಾರ್ಮಿಕರ ಪಾಲು ದೊಡ್ಡದಾಗಿದೆ. ಒಟ್ಟು ಶ್ರಮದಲ್ಲಿ ೨೬,೮೭೭ ಜನರು ಕೃಷಿಕಾರ್ಮಿಕರು. ಅಂದರೆ ಶೇ ೪೪.೨೧ ರಷ್ಟು ಇದ್ದಾರೆ. ಕೃಷಿ ಕಾರ್ಮಿಕರು ಸಾಮಾನ್ಯವಾಗಿ ಬಡತನ ರೇಖೆಯ ಕೆಳಗಡೆ ಜೀವಿಸುತ್ತಿದ್ದಾರೆ. ಇವರಿಗೆ ಶಾಶ್ವತವಾದ ಆದಾಯದ ಮೂಲಗಳಿರುವುದಿಲ್ಲ. ಕೃಷಿಯು

ಋತುಮಾನವನ್ನಾಧರಿಸಿದ ಉದ್ಯೋಗವಾಗಿದೆ. ಉಳಿದ ಶೇಕಡ ೧೫ರಷ್ಟು ಶ್ರಮ ಶಕ್ತಿಯು ಇತರೆ ರಂಗದಲ್ಲಿ ವ್ಯಯವಾಗುತ್ತಲಿದೆ. ಈ ವಿವರವನ್ನು ಕೊಷ್ಟಕ ೨.೨ ರಲ್ಲಿ ನೋಡಬಹುದು.

**೨.೫ ತಾಲ್ಲೂಕಿನಲ್ಲಿ ಮೂಲಭೂತ ಸೌಲಭ್ಯಗಳ ಅಭಿವೃದ್ಧಿ:**
**(Levels of Infrstructure Development):**

ಮೂಲಭೂತ ಸೌಲಭ್ಯಗಳನ್ನು ನಾವು ಮೂರು ಭಾಗ ಮಾಡ ಬಹುದಾಗಿದೆ. ೧. ಭೌತಿಕ ಮೂಲಭೂತ ಸೌಲಭ್ಯಗಳು೨. ಹಣಕಾಸಿನ ಮೂಲಭೂತ ಸೌಲಭ್ಯಗಳು ೩. ಮಾನವನ ಮೂಲಭೂತ ಸೌಲಭ್ಯಗಳು. ಇವು ಹಗರಿಬೊಮ್ಮನಹಳ್ಳಿ ತಾಲ್ಲೂಕಿನಲ್ಲಿ ಯಾವ ರೀತಿಯಾಗಿವೆ ಎಂದು ತಿಳಿಯಬಹುದು.

೨.೫.೧ ಭೌತಿಕ ಮೂಲಭೂತ ಸೌಲಭ್ಯಗಳು:

ಈ ಭೌತಿಕ ಮೂಲಭೂತ ಸೌಲಭ್ಯಗಳಲ್ಲಿ ಸಾರಿಗೆ ಮತ್ತು ಸಂಪರ್ಕ, ವಿದ್ಯುತ್ ನ ಉಪಯೋಗ ಬರುತ್ತದೆ. ಆದರೆ ಅಂಕಿಅಂಶಗಳು ಲಭ್ಯವಿಲ್ಲವಾದ್ದರಿಂದ ರಸ್ತೆಗಳ ಉದ್ದಳತೆ ಮತ್ತು ರೈಲುಮಾರ್ಗವನ್ನು ಮಾತ್ರ ವಿವರಿಸಲಾಗಿದೆ.

ಹಗರಿಬೊಮ್ಮನಹಳ್ಳಿ ತಾಲ್ಲೂಕಿನಲ್ಲಿ ಯಾವುದೇ ರಾಷ್ಟ್ರೀಯ ಹೆದ್ದಾರಿಗಳು ಹಾದು ಹೋಗಿರುವುದಿಲ್ಲ. ೩೧ಕಿ.ಮೀ. ರಾಜ್ಯ ಹೆದ್ದಾರಿ ಈ ತಾಲ್ಲೂಕಿನಲ್ಲಿದೆ. ಮತ್ತು ೧೧೨ಕಿ.ಮೀ ಮುಖ್ಯ ರಸ್ತೆಗಳಿವೆ. ಇತರ ಜಿಲ್ಲಾ ರಸ್ತೆಗಳು ೨೭ಕಿ.ಮೀ.ಹಳ್ಳಿ ರಸ್ತೆಗಳು ೧೮೯ಕಿ.ಮೀ. ಬಿ.ಡಿ.ಬಿ. ರಸ್ತೆಗಳು ೩೮ಕಿ.ಮೀ. ನೀರಾವರಿ ರಸ್ತೆಗಳು ೮.ಕಿ.ಮೀ ಇವೆ. ಗ್ರಾಮಗಳಲ್ಲಿ ರಾಷ್ಟ್ರಿಯ ಹಾಗೂ ರಾಜ್ಯದ ಹೆದ್ದಾರಿಯ ರಸ್ತೆಗಳು ಹೆಚ್ಚು ಪ್ರಮಾಣದಲ್ಲಿ ಇಲ್ಲವಾದ್ದರಿಂದಸಾರಿಗೆ ವ್ಯವಸ್ಥೆ ತಾಲ್ಲೂಕಿನಲ್ಲಿ ಕೆಳಮಟ್ಟದಲ್ಲಿದೆ. ಇದರಿಂದ ತಾಲ್ಲೂಕಿನಲ್ಲಿ ಭೌತಿಕ ಮೂಲ ಸೌಲಭ್ಯಗಳು ಕಡಿಮೆಪ್ರಮಾಣದಲ್ಲಿವೆ ಎಂದು ತಿಳಿಯುತ್ತದೆ.

ರೈಲು ಮಾರ್ಗದ ಉದ್ದಳತೆ ತಾಲ್ಲೂಕಿನಲ್ಲಿ ೩೯ಕಿ.ಮೀ. ಇದು ಮೀಟರ್ ಗೇಜ್ ಇದ್ದು ಈಗ ಬ್ರಾಡ್ ಗೇಜ್ ಗೆ ಪರಿವರ್ತಿಸುವ ಕಾರ್ಯ ನಡೆದಿದೆ. ತಾಲ್ಲೂಕಿನಲ್ಲಿ ನಾಲ್ಕು ರೈಲು ನಿಲ್ದಾಣಗಳಿವೆ. (ಜಿಲ್ಲಾ-ಅಂಕಿ ಅಂಶಗಳ ನೋಟ ೯೮-೯೫) ಈ ರೀತಿ ಯಾದಂತಹ ಭೌತಿಕ ಮೂಲಭೂತ ಸೌಲಭ್ಯಗಳನ್ನು ನಾವು ತಾಲ್ಲೂಕಿನಲ್ಲಿ ಕಾಣುತ್ತೇವೆ.

೨.೫.೨ ಹಣಕಾಸಿನ ಮೂಲಭೂತ ಸೌಲಭ್ಯಗಳು:

ತಾಲ್ಲೂಕಿನ ಕೃಷಿಕರಿಗೆ ಹಾಗೂ ವ್ಯಾಪಾರಸ್ಥರಿಗೆ ಅನುಕೂಲವಾಗುವ ಹಣಕಾಸಿನ ಸಂಸ್ಥೆಗಳನ್ನು ನಾವು ನೋಡಬಹುದಾಗಿದೆ.ತಾಲ್ಲೂಕಿನಲ್ಲಿ ಐದು ವಾಣಿಜ್ಯ ಬ್ಯಾಂಕ್ ಶಾಖೆಗಳಿವೆ. ಮತ್ತು ಗ್ರಾಮಗಳಲ್ಲಿ ಏಳು

ಗ್ರಾಮೀಣ ಬ್ಯಾಂಕುಗಳ ಶಾಖೆಗಳಿವೆ.ಒಟ್ಟು ೧೨ ಬ್ಯಾಂಕು ಶಾಖೆಗಳು ಕಾರ್ಯ ನಿರ್ವಹಿಸುತ್ತಲಿವೆ. ತಾಲ್ಲೂಕಿನಲ್ಲಿ ಒಂದು ಪ್ರಾಥಮಿಕ ಭೂ ಅಭಿವೃದ್ಧಿ ಬ್ಯಾಂಕ್ ಸಹ ಇದೆ. ಕೃಷಿ ಸಾಲ ನೀಡಿಕೆಗಾಗಿ (೧೫) ಹದಿನೈದು ಸಹಕಾರಿ ಸಂಘಗಳಿವೆ. ಮತ್ತು ಹದಿನಾರು(೧೬)ಹಾಲು ಉತ್ಪಾದಕರು ಸಹಕಾರಿ ಸಂಘಗಳಿವೆ. ಇತರೆ ೨೫ ಕೃಷಿ ಉದ್ದೇಶಗಳಿಗಾಗಿ ಸಾಲ ನಿಡುವ ಸಂಸ್ಥೆಗಳಿವೆ.ಬೇರೆ ತಾಲ್ಲೂಕುಗಳಿಗೆ ಹೋಲಿಸಿದರೆ ಮೇಲಿನ ಸೌಲಭ್ಯಗಳು ತುಂಬಾ ಕೆಳಮಟ್ಟದಲ್ಲಿವೆ.

### ೨.೫.೩ ಮಾನವನ ಮೂಲಭೂತ ಸೌಲಭ್ಯಗಳು:

ಮಾನವನ ಮೂಲಭೂತ ಸೌಲಭ್ಯಗಳಲ್ಲಿ ಶಿಕ್ಷಣ ಮತ್ತು ಆರೋಗ್ಯ ಬರುತ್ತದೆ. ಇವು ಹಗರಿಬೊಮ್ಮನಹಳ್ಳಿ ತಾಲ್ಲೂಕಿನಲ್ಲಿ ಯಾವ ರೀತಿಯಲ್ಲಿ ಇವೆ ಎಂಬುದನ್ನು ಈಗ ನೋಡಬಹುದಾಗಿದೆ.

ಮೂಲಭೂತ ಸೌಲಭ್ಯಗಳಲ್ಲಿ ಶಿಕ್ಷಣ ಬಹುಮುಖ್ಯವಾದದ್ದು. ಶಿಕ್ಷಣ ಪಡೆದವರು ಇತರ ಮೂಲಭೂತ ಸೌಲಭ್ಯಗಳನ್ನು ತಕ್ಕಮಟ್ಟಿಗೆ ಸರಿಪಡಿಸಿಕೊಳ್ಳಬಲ್ಲರು. ತಾಲ್ಲೂಕಿನಲ್ಲಿ ಏಳು ಶಿಶು ವಿಹಾರಗಳಿದ್ದು ಅದರಲ್ಲಿ ೪೨೦ಮಕ್ಕಳಿವೆ.೧೨೦ ಪ್ರಾಥಮಿಕ ಶಾಲೆಗಳಿದ್ದು ಶಾಲೆಗಳಲ್ಲಿ ೨೬,೦೭೬ ಮಕ್ಕಳು ಓದುತ್ತಿದ್ದಾರೆ. ೧೬ ಪ್ರೌಢ ಶಾಲೆಗಳಿದ್ದು ೩೭೭೨ ವಿದ್ಯಾರ್ಥಿಗಳಿದ್ದಾರೆ. ಒಂದು ಪದವಿ ಕಾಲೇಜ್ ಇದ್ದು ೩೩೪ ವಿದ್ಯಾರ್ಥಿಗಳಿದ್ದಾರೆ. (ಜಿಲ್ಲಾ ಅಂಕಿ ಅಂಶಗಳು ನೋಟ್‌೪-೯೫) ಯಾವುದೇ ತಾಂತ್ರಿಕ ಹಾಗೂ ವೈದ್ಯಕೀಯ ಕಾಲೇಜ್ ಗಳು ಇರುವುದಿಲ್ಲ. ಇವು ೧೯೯೧ರ ಜನಗಣತಿ ಪ್ರಕಾರ ಇವೆ.

ತಾಲ್ಲೂಕಿನಲ್ಲಿ ಒಂದು ಸರಕಾರಿ ಆಸ್ಪತ್ರೆ ಇದ್ದು, ಇದು ೧೦ ಹಾಸೆಗೆಗಳನ್ನು ಹೊಂದಿದೆ. ಆರು ಪ್ರಥಮಿಕ ಆರೋಗ್ಯ ಕೇಂದ್ರಗಳು ಇವೆ. ಇದರಲ್ಲಿ ೧೨ ಹಾಸಿಗೆಗಳಿವೆ. ತಾಲ್ಲೂಕಿನಲ್ಲಿ ಒಂದು ಕುಟುಂಬ ಕಲ್ಯಾಣ ಕೇಂದ್ರವಿದ್ದು ೪೧ ಉಪಕೇಂದ್ರಗಳಿವೆ. ತಾಲ್ಲೂಕಿನಲ್ಲಿ ೨೦ ಔಷಧಿ ಅಂಗಡಿಗಳಿವೆ.

ಈ ರೀತಿಯ ಮೂಲಭೂತ ಸೌಲಭ್ಯಗಳನ್ನು ನಾವು ತಾಲ್ಲೂಕಿನಾದ್ಯಂತ ಕಾಣಬಹುದಾಗಿದೆ.

### ೨.೬ ಫಲಾನುಭವಿಗಳ ಸಾಮಾಜಿಕ ಆರ್ಥಿಕ ಹಿನ್ನಲೆ:-

ಯಾವುದೇ ಕ್ಷೇತ್ರಕ್ಕೆ ಸಂಬಂಧಿಸಿದ, ಜನತೆಗೆ ಸಂಬಂಧಿಸಿದ ಅಧ್ಯಯನವನ್ನು ಕೈಗೊಳ್ಳಬೇಕಾದಾಗ ಮೊದಲು ಆಕ್ಷೇತ್ರದಹಿನ್ನಲೆ ಅರಿಯುವುದು ಅವಶ್ಯಕ. ಜನತೆಗೆ ಸಂಬಂಧಿಸಿದ್ದರೆ ಅವರ ಸಾಮಾಜಿಕ-ಆರ್ಥಿಕ ಜೀವನವನ್ನು ತಿಳಿದುಕೊಳ್ಳುವುದು ಅವಶ್ಯಕ. ಈ ಸಂಗತಿಗಳನ್ನು ಒಳಗೊಳ್ಳದೇ ನಾವು ಯಾವುದೇ ನಿರ್ಧಾರಕ್ಕೆ

ಬರಲಾಗುವುದಿಲ್ಲ.ಸಾಮಾಜಿಕ ಜೀವನದಲ್ಲಿ ಸಾಕ್ಷರತೆ, ಔಪಚಾರಿಕಶಿಕ್ಷಣ, ಜನಸಂಖ್ಯೆ, ಲಿಂಗ ಪ್ರಮಾಣ, ಧರ್ಮ ಮತ್ತು ಜಾತಿಗಳ ಮಾಹಿತಿ ತಿಳಿಯುವುದು ಅವಶ್ಯಕ. ಈ ಎಲ್ಲಾ ಅಂಶಗಳು ಜನರ ಅಭಿವೃದ್ಧಿಗೆ ಕಾರಣವಾಗಬಲ್ಲವುಗಳಾಗಿವೆ. ಯಾವುದೇ ಯೋಜನೆಯ ಯಶಸ್ವಿ ಮತ್ತು ವೈಫಲ್ಯಕ್ಕೆ ಒಂದು ಅಂಶ ಕಾರಣವಾಗಿರುವುದಿಲ್ಲ. ಅಲ್ಲಿ ಬಹುವಿಧವಾದ ಕಾರಣಗಳಿರುತ್ತವೆ. ಈ ರೀತಿಯ ಕಾರಣಗಳು ಸಮಗ್ರ ಗ್ರಾಮೀಣಾಭಿವೃದ್ಧಿ ಯೋಜನೆಗೆ ಯಾವ ರೀತಿಯಲ್ಲಿ ಪೂರಕ ಮಾರಕವಾಗಿವೆ ಎಂಬುದನ್ನು ಇಲ್ಲಿ ನೋಡಬಹುದು.

ಪ್ರಸ್ತುತ ಅಧ್ಯಯನದಲ್ಲಿ ಮಾಹಿತಿಯನ್ನು ಪುರುಷ ಹಾಗೂ ಮಹಿಳಾ ಫಲಾನುಭವಿಗಳಿಂದ ಪಡೆದುಕೊಳ್ಳಲಾಗಿದೆ.ಒಟ್ಟು ೫೨ ಜನರಿಂದ ಇಲ್ಲಿ ಮಾಹಿತಿ ಸಂಗ್ರಹಿಸಿದೆ. ಅಧ್ಯಯನದ ನಮೂನೆಯಲ್ಲಿ ಶೇ ೬೩.೪೬ ಪುರುಷರು ಮತ್ತುಶೇ ೩೬.೫೪ರಷ್ಟು ಮಹಿಳೆಯರಿದ್ದಾರೆ. ಪುರುಷರು ಮತ್ತು ಮಹಿಳೆಯರು ಯಾವ ರೀತಿಯಲ್ಲಿ ಯೋಜನೆಯಪ್ರಯೋಜನ ಪಡೆದಿದ್ದಾರೆ ಎಂಬುದನ್ನು ತಿಳಿಯಬಹುದಾಗಿದೆ. ಪುರುಷರು ಯಾವ ಕಾರಣಗಳಿಂದ ಯೋಜನಯ ಫಲದೊರಕಿಸಿ ಕೊಳ್ಳವಲ್ಲಿ ವಿಫಲರಾಗಿದ್ದಾರೆ. ಮತ್ತು ಪ್ರಯೋಜನವಾದಲ್ಲಿ ಅವರಿಗೆ ಯಾವ ಅಂಶಗಳು ಸಹಾಯಕವಾಗಿವೆಎಂಬುದನ್ನು ತಿಳಿಯಬಹುದು. ಅದೇ ರೀತಿಯಲ್ಲಿ ಮಹಿಳೆಯರಿಗೂ ಸಹಾ ಯೋಜನೆ ಯಾವ ರೀತಿಯಲ್ಲಿ ಸಾಧಕ-ಬಾಧಕವಾಗಿದೆ. ಎಂದು ತಿಳಿಯಬಹುದು.

ಅಧ್ಯಯನದ ನಮೂನೆಯಲ್ಲಿ ೧೫ರಿಂದ ೨೪ರ ವಯೋಮಿತಿಯೊಳಗಿನವರು ಶೇ ೫.೭೬ರಷ್ಟಿದ್ದಾರೆ. ಇವರಲ್ಲಿ ೧.೯೨ರಷ್ಟು ಪುರುಷರು ೩.೮೪ರಷ್ಟು ಮಹಿಳೆಯರಿದ್ದಾರೆ. ಇದರಿಂದ ನಮಗೆ ತಿಳಿಯಿವುದೇನೆಂದರೆ ಹದಿನೈದರಿಂದ ಇಪ್ಪತ್ನಾಲ್ಕರ ವಯೋಮಿತಿಯೊಳಗಿನವರು ಪುರುಷ (ಫಲಾನುಭವಿ) ಕೆಲಸಗಾರರಿಗಿಂತ ಮಹಿಳಾಕೆಲಸಗಾರು ಹೆಚ್ಚು ಇರುವುದು ಕಂಡು ಬರುತ್ತಿದೆ. ಈ ವಯಸ್ಸಿನ ಸ್ತ್ರಿಯರು ಚಿಕ್ಕವಯಸ್ಸಿಗೆ ಶ್ರಮಜೀವಿಗಳಾಗು-ತಿದ್ದಾರೆ. ಇಲ್ಲವೆ ಅವರಿಗೆ ಕುಟುಂಬದ ಹೊರೆ ಹೆಚ್ಚು ಬೀಳುತ್ತಲಿದೆ.

ಕೋಷ್ಟಕ:೨.೩ಫಲಾನುಭವಿಗಳ ವಯಸ್ಸು ಮತ್ತು ಲಿಂಗವಾರು ವರ್ಗೀಕರಣ:

| ಕ್ರ.ಸಂ. | ವಯಸ್ಸು | ಪುರುಷ | ಮಹಿಳೆ | ಒಟ್ಟು. |
|---|---|---|---|---|
| ೧ | ೧೫-೨೪ | ೧(೧.೯೨) | ೨(೩.೮೪) | ೩ (೫.೭೬) |
| ೨ | ೨೫-೩೪ | ೬(೧೧.೫೩) | ೬(೧೧.೫೩ | ೧೨(೨೩.೦೭) |
| ೩ | ೩೫-೫೦ | ೧೧(೨೧.೧೫) | ೧೧(೨೧.೧೫) | ೩೭ ೭೧.೧೫ |
| | | ೩೩(೬೩.೪೬) | ೧೯(೩೬.೫೩) | ೫೨.(೧೦೦.೦೦) |

೨೫ ರಿಂದ ೩೪ರ ವಯೋಮಿತಿಯೊಳಗಿರುವವರು ಶೇ ೨೩.೦೭ರಷ್ಟಿದ್ದಾರೆ. ಈ ಒಂದು ಮಿತಿಯಲ್ಲಿ (ಶೇ ೨೩.೦೭)ಸ್ತ್ರಿ-ಪುರುಷರ ಪ್ರಮಾಣ ಸಮಪ್ರಮಾಣದಲ್ಲಿದೆ. ಇದರಲ್ಲಿ (ಶೇ ೧೧.೫೩)ರಲ್ಲಿ ಪುರುಷರಿದ್ದರೆ ಇಷ್ಟೆ ಪ್ರಮಾಣದಲ್ಲಿ ಮಹಿಳೆಯರಿದ್ದಾರೆ. ೨೫ ರಿಂದ ೩೪ರ ವಯೋಮಿತಿ ಶ್ರಮ ಜೀವಿಗಳಗೆ, ದುಡಿಯುವವರಿಗೆ ಒಳ್ಳೆಯ ಕಾಲಾವಧಿ. ಆದರೆ ಈ ವಯೋಮಾನದಲ್ಲಿ ಕೇವಲ ಶೇ ೨೩.೭೧ ಫಲಾನುಭವಿಗಳು ಇರುವುದು ಕಾಣುತ್ತದೆ. ಈ ಒಂದು ವಯೋಮಿತಿಯ ಜನರಿಗೆ ಹೆಚ್ಚಿನ ಸಾಲ ಸೌಲಭ್ಯ ಸಿಗದೇ ಇರುವುದು ಒಂದು ಕಾರಣವಾಗಿರಬಹುದು. ಈ ಹಂತದಲ್ಲಿ ಲಿಂಗ ಸಮಾನತೆ ಇರುವುದು ಕಾಣುತ್ತದೆ. ಇನ್ನು ೩೫ರಿಂದ ೫೦ ರ ವಯೋಮಿತಿಯೊಳಗಡೆ ಇರುವ ಫಲಾನುಭವಿಗಳು ಶೇ ೭೧.೧೫ರಷ್ಟು. ಇವರಲ್ಲಿ ಶೇ ೫೦.೦೦ರಷ್ಟು ಪುರುಷರಿದ್ದಾರೆ. ಶೇ ೨೧.೧೫ರಷ್ಟು ಮಹಿಳೆಯರಿದ್ದಾರೆ. ಈ ವಯೋಮಿತಿಗೊಳಗಡೆ ದುಡಿಯಲು ಶಕ್ತರಿದ್ದರೂ ದುಡಿಯ ಬೇಕೆಂಬ ಪ್ರವೃತ್ತಿ ಇಳಿಮುಖವಾಗಿರುತ್ತದೆ. ಇದೇ ಹಂತದಲ್ಲಿ ಹೆಚ್ಚು ಫಲಾನುಭವಿಗಳನ್ನು ಕಾಣುತ್ತೇವೆ. ಪುರುಷರು ಹೆಚ್ಚು ಇರುವುದು ಇಲ್ಲಿ ಕಂಡು ಬರುತ್ತದೆ. ಮಹಿಳೆಯರು ಈ ಹಂತದಲ್ಲಿ ದೈಹಿಕವಾಗಿ ದುರ್ಬಲರಾಗಿರುವುದೇ ಹೆಚ್ಚು. ಈ ರೀತಿಯಲ್ಲಿ ನಮ್ಮ ಅಧ್ಯಯನದ ಫಲಾನುಭವಿಗಳು ಇದ್ದಾರೆ.

ಹಗರಿಬೊಮ್ಮನಹಳ್ಳಿ ತಾಲ್ಲೂಕು ಧರ್ಮದಲ್ಲಿ ವೈವಿಧ್ಯತೆಯಿಂದ ಕೂಡಿದ ತಾಲ್ಲೂಕಾಗಿದೆ. ಪ್ರಸ್ತುತ ನಮೂನೆಯು ೮೬.೫೩ ಹಿಂದೂಗಳನ್ನು ೧೩.೪೬ ಮುಸ್ಲಿಮರನ್ನು ಒಳಗೊಂಡಿರುತ್ತದೆ. ಹಿಂದೂಗಳಲ್ಲಿ ೫೧.೫೨ ಪುರುಷರುಮತ್ತು ೩೪.೬೧ ಮಹಿಳೆಯರಿದ್ದಾರೆ. ಮುಸ್ಲಿಮರಲ್ಲಿ ೧೧.೫೩ ಪುರುಷರು ಮತ್ತು ೩೪.೬೧ ಮಹಿಳೆಯರಿದ್ದಾರೆ. ಮುಸ್ಲಿಮರಲ್ಲಿ ೧೧.೫೩ ಪುರಷರು ೧.೯೨ ನಷ್ಟು ಮಹಿಳೆಯ ರಿದ್ದಾರೆ.

ಕೋಷ್ಟಕ ೨.೪: ಫಲಾನುಭವಿಗಳ ಲಿಂಗವಾರು, ಧಾರ್ಮಿಕ ಮತ್ತು ಜಾತಿವಾರು ವಿಂಗಡನೆ:

| ಕ್ರ.ಸಂ. | ಲಿಂಗ | ಹಿಂದೂ | ಮುಸ್ಲಿಂ | ಕ್ರಿಸ್ತ | ಪ.ಜಾ. | ಪ.ಪ | ಹಿಂ.ವ. |
|---|---|---|---|---|---|---|---|
| ೧ | ಪುರುಷ | ೨೭(೫೧.೫೨) | ೬(೧೧.೫೩) | --- | ೫(೯.೬೧) | ೨(೩.೮೪) | ೨೬(೫೦) |
| ೨ | ಮಹಿಳೆ | ೧೮(೩೪.೬೧) | ೧(೧.೯೨) | --- | ೭(೧೩.೪೬) | ೧(೧.೯೨) | ೧೧(೨೧.೧೫) |
| | ಒಟ್ಟು | ೪೫(೮೬.೫೩) | ೭(೧೩.೪೬) | --- | ೧೨(೨೩.೦೭) | ೩.(೫.೭೬) | ೩೭(೭೧.೧೫) |

ಮುಸ್ಲಿಮರಲ್ಲಿ ಶೇ ೧೧.೫೩ ಪುರುಷರು ಶೇ ೧.೯೨ ನಷ್ಟು ಮಹಿಳೆಯರಿದ್ದಾರೆ. ಇದೇ ಧರ್ಮದ ಸ್ತ್ರಿ ಪುರುಷರಿಗೆ ಇವೇ ಯೋಜನೆಗಳು ಅನುಕೂಲವಾಗಿವೆ ಎಂದು ಹೇಳಲು ಬರುವುದಿಲ್ಲ. ಆದರೂ ಯೋಜನೆಯು ಫಲಕಾರಿಯಾಗಲು ಧರ್ಮವು ಒಂದು ಅಂಶವೆಂದು ಪರಿಗಣಿಸಿ ಎರಡು ಧರ್ಮದ ವಿವಿಧ ವರ್ಗದ ಜನರನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಧರ್ಮದಲ್ಲಿನ ಜಾತಿಗಳನ್ನು ವಿಂಗಡನೆ ಮಾಡಿದಾಗ ಈ ರೀತಿಯಾದ ಶೇಕಡವಾರು ಬರುತ್ತದೆ. ಪರಿಶಿಷ್ಟ ಜಾತಿಯವರು ಶೇ ೨೩.೦೭ ರಷ್ಟಿದ್ದಾರೆ, ಇವರಲ್ಲಿ ಶೇ ೯.೬೧ ರಷ್ಟು

ಪುರುಷ ಫಲಾನುಭವಿಗಳು ಮತ್ತು ೧೩.೪೬ರಷ್ಟು ಮಹಿಳಾ ಫಲಾನುಭವಿಗಳಿದ್ದಾರೆ. ಪರಿಶಿಷ್ಟ ಜಾತಿಯಲ್ಲಿ ಪುರಷರಿಗಿಂತ ಮಹಿಳಾ ಫಲಾನುಭವಿಗಳು ಅಧಿಕವಾಗಿದ್ದಾರೆ. ಈ ನಮೂನೆಯಲ್ಲಿ ಶೇ ೧೫.೭೬ ರಷ್ಟು ಪರಿಶಿಷ್ಟ ಪಂಗಡದವರಿದ್ದಾರೆ. ಇವರಲ್ಲಿ ೩.೮೪ ಪುರುಷ ಫಲಾನುಭವಿಗಳು ಮತ್ತು ೧.೯೨ ರಷ್ಟು ಮಹಿಳಾ ಫಲಾನುಭವಿಗಳು ಇದ್ದಾರೆ. ಹಿಂದುಳಿದ ವರ್ಗಗಳಲ್ಲಿ (ಫಲಾನುಭವಿಗಳು) ದುಡಿಯುವವರಲ್ಲಿ ಪುರುಷ-ಮಹಿಳೆಯರಲ್ಲಿ ಹೆಚ್ಚು ವ್ಯತ್ಯಾಸ ವಿರುವುದು ಗೋಚರಿಸುತ್ತದೆ. ಆದರೆ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳಲ್ಲಿ ಅಷ್ಟೇನು ಹೆಚ್ಚಿನ ವ್ಯತ್ಯಾಸ ಕಂಡು ಬರುವುದಿಲ್ಲ.

ಸಾಮಾಜಿಕ ಆರ್ಥಿಕ ಜೀವನದಲ್ಲಿ ಸಾಕ್ಷರತೆಯು ಪ್ರಭಾವ ಬೀರುವ ಅಂಶವಾಗಿದೆ. ಸಾಕ್ಷರತೆಯ ಪ್ರಮಾಣ ಹೆಚ್ಚಿರುವ ರಾಷ್ಟ್ರಮತ್ತು ಪ್ರದೇಶವು ಅಭಿವೃದ್ಧಿ ಹೊಂದಿದ ಪ್ರದೇಶವೆಂದು ಪರಿಗಣಿತವಾಗಿದೆ. ಸಾಕ್ಷರತೆ ಹೊಂದಿದ ಜನರು ಯೋಜನೆಯ ಪ್ರಯೋಜನ ಹೆಚ್ಚು ಪಡೆಯುತ್ತಿದ್ದಾರೆ ಎನ್ನುವುದು ಒಂದು ಊಹೆ. ಈ ಹಿನ್ನೆಲೆಯಲ್ಲಿ ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಫಲಾನುಭವಿಗಳ ಸಾಕ್ಷರತೆಯನ್ನು (ವಿದ್ಯಾವಂತರನ್ನು) ಆಧಾರವಾಗಿಟ್ಟುಕೊಂಡು ಯೋಜನೆಯ ಫಲದ ಗತಿಯನ್ನು ನೋಡಬಹುದಾಗಿದೆ.

ಕೊಷ್ಟಕ೨.೫: ಅಕ್ಷರಸ್ಥ ಮತ್ತು ಅನಕ್ಷರಸ್ಥ ಫಲಾನುಭವಿಗಳ ವಿವರ:

| ಸಂ. | ಹಂತ | ಲಿಂಗ ವಾರು | | ಒಟ್ಟು |
|---|---|---|---|---|
| | | ಪುರುಷ | ಮಹಿಳೆ | |
| ೧ | ಅನಕ್ಷರಸ್ಥರು | ೧೪(೨೬.೯೩) | ೧೫(೨೮.೮೪) | ೨೯(೫೫.೭೬) |
| ೨ | ಅಕ್ಷರಸ್ಥರು | ೧೯(೩೬.೫೩) | ೪ (೭.೬೯) | ೨೩(೪೪.೨೩) |
| | | ೩೩ | ೧೯ | ೫೨ |
| ಅ | ಪ್ರಾಥಮಿಕ(೧-೭) | ೧೬(೩೦.೭೬) | ೩ (೫.೭೬) | ೧೯(೩೬.೫೩) |
| ಆ | ಪ್ರೌಢ(೮-೧೦) | ೩(೫.೭೬) | ೧(೧.೯೨) | ೪(೭.೬೯) |

ಒಟ್ಟು ಫಲನುಭವಿಗಳಲ್ಲಿ ಅಕ್ಷರಸ್ಥರ ಸಂಖ್ಯೆಗಿಂತ ಅನಕ್ಷರಸ್ಥರ (ಸಂಖ್ಯೆ) ಶೇಕಡವಾರು ಹೆಚ್ಚೆಗೆ ಕಂಡು ಬರುತ್ತಿದೆ. ಒಟ್ಟು ಫಲಾನುಭವಿಗಳಲ್ಲಿ ಶೇ ೫೫.೭೬ ಅನಕ್ಷರಸ್ಥರು ಮತ್ತು ಶೇ ೪೪.೨೩ ನಷ್ಟು ಅಕ್ಷರಸ್ಥರಿದ್ದಾರೆ.ಅಕ್ಷರಸ್ಥರಲ್ಲಿ ಶೇ ೩೬.೫೩ ಪುರುಷರಿದ್ದಾರೆ ಶೇ ೭.೬೯ರಷ್ಟು ಮಹಿಳೆಯರಿದ್ದಾರೆ. ಅನಕ್ಷರಸ್ಥರಲ್ಲಿ ಶೇ ೨೬.೯೨ಪುರುಷರು ಶೇ ೨೮.೮೪ ಮಹಿಳೆಯರು ಇದ್ದಾರೆ. ಇದರಿಂದ ಅನಕ್ಷರಸ್ಥ ಮಹಿಳೆಯರು ಪುರುಷರಿಗಿಂತ ಅಧಿಕ ವಿರುವುದು, ಅಕ್ಷರಸ್ಥ ಮಹಿಳೆಯರು ಪುರುಷರಿಗಿಂತ ಕಡಿಮೆ ಇರುವುದು ಗೋಚರವಾಗುತ್ತದೆ. ಪುರುಷ ಅಕ್ಷರಸ್ಥರಲ್ಲಿ ಶೇ ೩೦.೭೬ ರಷ್ಟು ಪ್ರಾಥಮಿಕ ಹಂತವನ್ನುಶೇ ೫.೭೬ ರಷ್ಟು

ಪ್ರೌಢ ಹಂತವನ್ನು ಮುಗಿಸಿದವರಿದ್ದಾರೆ.ಮಹಿಳೆಯರಲ್ಲಿ ಶೇ ೩.೭೬ ರಷ್ಟು ಪ್ರಾಥಮಿಕ ಹಂತವನ್ನು ಶೇ ೧.೯೨ ರಷ್ಟು ಪ್ರೌಢ ಹಂತವನ್ನು ಮುಗಿಸಿದವರಿದ್ದಾರೆ.

ನಮೂನೆಯ ಶೇ ೪೪.೨೩ ರಷ್ಟು ಅಕ್ಷರಸ್ಥ ಫಲಾನುಭವಿಗಳು ಯಾವ ರೀತಿಯಲ್ಲಿ ಎಷ್ಟು ಫಲಾನುಭವಿಗಳು ಯೋಜನೆಯನ್ನು ಫಲಪ್ರದವಾಗಿಸಿ ಕೊಂಡಿದ್ದಾರೆ. ಎಂಬುದನ್ನು ಮುಂದಿನ ಅಧ್ಯಾಯದಲ್ಲಿ ವಿವರಿಸಲಾಗಿದೆ.

೧೯೯೧ ರ ಜನಗಣತಿ ಪ್ರಕಾರ ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಒಟ್ಟು ಶ್ರಮ ಶಕ್ತಿಯಲ್ಲಿ ಶೇ ೮೫.೦೨ ರಷ್ಟುಜನರು ಕೃಷಿ ಮತ್ತು ಕೃಷಿ ಪೂರಕ ಉದ್ಯೋಗದಲ್ಲಿ ತೊಡಗಿದ್ದಾರೆ. (District Census Hnad Book-೧೯೯೧)ಅವರಲ್ಲಿ ಕೃಷಿ ಕಾರ್ಮಿಕರ ಪ್ರಮಾಣ ಶೇ ೪೪.೨೧ ರಷ್ಟಿದೆ. ಅದರಂತೆಯೆ ನಮ್ಮ ಅಧ್ಯಯನದಲ್ಲಿ ಕೂಲಿ ಕಾರ್ಮಿಕರು ಹೆಚ್ಚು ಇರುವುದು ಕಂಡು ಬರುತ್ತಿದೆ. ನಮೂನೆಯಲ್ಲಿಯೂ ಹೆಚ್ಚು ಫಲಾನುಭವಿಗಳಲ್ಲಿ ಕೃಷಿ ಕಾರ್ಮಿಕರಾಗಿರುವುದು ಕಂಡುಬರುತ್ತದೆ. ಒಟ್ಟು ಫಲಾನುಭವಿಗಳಲ್ಲಿ ಶೇ ೪೦.೩೮ ರಷ್ಟು ಕೆಲಸ ಮಾಡುವರಾಗಿದ್ದಾರೆ.

ಕೊಷ್ಟಕ ೨.೬:ಫಲಾನುಭವಿಗಳ ಉದ್ಯೋಗವಾರು ವರ್ಗೀಕರಣ:

| ಸಂ. | ಉದ್ಯೋಗ | ಪುರುಷ | ಮಹಿಳೆ | ಒಟ್ಟು. |
|---|---|---|---|---|
| ೧ | ವ್ಯವಸಾಯ | ೮(೧೫.೩೮) | ೨ (೩.೮೪) | ೧೦(೧೯.೨೨) |
| ೨ | ವ್ಯಾಪಾರ | ೧೧(೨೧.೧೫) | ೪ (೭.೬೯) | ೧೫(೨೮.೮೪) |
| ೩ | ಕೂಲಿ | ೯ (೧೭.೩೦) | ೧೨(೨೩.೦೭) | ೨೧(೪೦.೩೭) |
| ೪ | ಇತರೆ | ೫(೯.೬೧) | ೧(೧.೯೨) | ೦೬(೧೧.೫೩) |
| | | ೩೩ | ೧೯ | ೫೨ |

ಅಂದರೆ ಇವರು ಕೃಷಿ ಮತ್ತು ಕೃಷಿಗೆ ಸಂಬಂಧಿಸಿದ ಕೆಲಸಗಳಲ್ಲಿ ತೊಡಗಿದ್ದಾರೆ. ಇವರಲ್ಲಿ ಶೇ ೧೭.೩೦ ರಷ್ಟು ಪುರುಷ ಫಲಾನುಭವಿಗಳು ಶೇ ೨೩.೦೭ ರಷ್ಟು ಮಹಿಳಾ ಫಲಾನುಭವಿಗಳಿದ್ದಾರೆ. ಇಲ್ಲಿ ಕೂಲಿ ಕಾರ್ಮಿಕರು ಪುರುಷರಿಗಿಂತ ಮಹಿಳೆಯರೆ ಹೆಚ್ಚು ಇರುವುದು ಕಂಡು ಬರುತ್ತಿದೆ. ಮಹಿಳಾ ಫಲಾನುಭವಿಗಳಲ್ಲಿ ಹೆಚ್ಚು ಕೂಲಿಕಾರ್ಮಿಕರಾಗಿದ್ದಾರೆ. ಒಟ್ಟು ಫಲಾನುಭವಿಗಳಲ್ಲಿ ಶೇಕಡವಾರು ಮಹಿಳಾ ಕಾರ್ಮಿಕರ ಪ್ರಮಾಣ ಹೆಚ್ಚು ಇದೆ. ಸಣ್ಣಮತ್ತು ಅತಿ ಸಣ್ಣ ರೈತರಾಗಿ ಕೆಲಸ ಮಾಡುವ ಫಲಾನುಭವಿಗಳು ಶೇ ೧೯.೨೨ರಷ್ಟು. ಇವರಲ್ಲಿ ಶೇ ೧೫.೩೮ ರಷ್ಟುಪುರುಷ ಫಲಾನುಭವಿಗಳಿದ್ದಾರೆ. ಶೇ ೩.೮೪ ರಷ್ಟು ಮಹಿಳೆಯರು ಕೃಷಿ ಕೆಲಸ ನಿರ್ವಹಿಸುತ್ತಿದ್ದಾರೆ. ಫಲಾನುಭವಿಗಳೆಲ್ಲಿ ಶೇ ೨೮.೮೪ ವ್ಯಾಪಾರ ಚಟುವಟಿಕೆಯಲ್ಲಿ ತೊಡಗಿದ್ದಾರೆ. ಇವರೆಲ್ಲಿ ಶೇ ೨೧.೧೫ ಪುರುಷ ಶೇ ೭.೬೯ ರಷ್ಟು.ಮಹಿಳಾ ಫಲಾನುಭವಿಗಳಿದ್ದಾರೆ. ಕೂಲಿಯ ನಂತರ ವ್ಯಾಪಾರ ಚಟುವಟಿಕೆಯು ಎರಡನೇ ಸ್ಥಾನದಲ್ಲಿರುತ್ತದೆ.

ನೇಕಾರಿಕೆ, ಮೈಕ್ ಸೆಟ್ , ಬುಟ್ಟಿ ಎಣೆಯುವುದು ಇಂತಹ (ಇತರೆ) ಚಟುವಟಿಕೆಯಲ್ಲಿ ಶೇ ೧೧.೫೩ ರಷ್ಟು ಫಲಾನುಭವಿಗಳಿದ್ದಾರೆ. ಅವರಲ್ಲಿ ಶೇ ೯.೬೧ ರಷ್ಟು ಪುರುಷ ಫಲಾನುಭವಿಗಳಿದ್ದಾರೆ. ಮತ್ತು ——— ಶೇ ೧.೯೨ ರಷ್ಟುಮಹಿಳಾ ಫಲಾನುಭವಿಗಳೂ ಇದ್ದಾರೆ. ಫಲಾನುಭವಿಗಳ ಉದ್ಯೋಗದ ಸ್ಥಿತಿಯಿಂದ ತಿಳಿಯುವುದೇನೆಂದರೆ ಒಟ್ಟಾಗಿಯು ಫಲಾನುಭವಿಗಳ ಉದ್ಯೋಗ ಸ್ಥಿತಿಯಲ್ಲಿ ಕೃಷಿ ಕಾರ್ಮಿಕರು ಹೆಚ್ಚು ಇರುವುದು ಕಂಡು ಬರುತ್ತದೆ. ಅದರಲ್ಲಿ ಮಹಿಳೆಯರು ಹೆಚ್ಚು ಕೃಷಿ ಕಾರ್ಮಿಕರು(ಶೇ ೨೩.೦೭)ಇರುವುದನ್ನು ಕಾಣಬಹುದಾಗಿದೆ. ನಂತರದ ಸ್ಥಾನವನ್ನು ವ್ಯಾಪಾರ ರಂಗದಲ್ಲಿಯ ಫಲಾನುಭವಿಗಳು ಪಡೆದಿದ್ದಾರೆ. ಈ ರೀತಿಯ ಫಲಾನುಭವಿಗಳ ಉದ್ಯೋಗಸ್ಥಿತಿ ಗೋಚರಿಸುತ್ತದೆ.

ಪ್ರಸ್ತುತ ನಮೂನೆಯಲ್ಲಿ ಫಲಾನುಭವಿಗಳು ಯಾವುದೇ ರೀತಿಯಿಂದಲೂ ಆರ್ಥಿಕವಾಗಿ ಪ್ರಾಬಲ್ಯ ಹೊಂದಿರುವುದು ಗೋಚರಿಸುವುದಿಲ್ಲ. ಅವರ ಭೂಹಿಡುವಳಿಗಳ ಪ್ರಮಾಣ ಅತ್ಯಲ್ಪವಾಗಿರುವುದು ಕಂಡುಬರುತ್ತಿದೆ.

ಕೊಷ್ಟಕ: ೨.೭ಫಲಾನುಭವಿಗಳ ಭೂ ಹಿಡುವಳಿಗಳ ಸ್ವರೂಪ:

| ಸಂ. | ವಿವರ | ಪುರುಷ | ಮಹಿಳೆ | ಒಟ್ಟು |
|---|---|---|---|---|
| ೧ | ಭೂರಹಿತರು | ೧೧(೨೧.೧೫) | ೧೩ (೨೫) | ೨೪(೪೬.೧೫) |
| ೨ | ಭೂಮಿ ಉಳ್ಳವರು | ೨೨ (೪೨.೩) | ೦೬(೧೧.೫೩) | ೨೮(೫೩.೮೪) |
| | | ೩೩(೬೩.೪೫) | ೧೯(೩೬.೫೩) | ೫೨(೧೦೦-೦೦) |
| ಅ. | ಖುಷ್ಕಿ | ೧೮(೩೪.೬೧) | ೦೪(೭.೬೯) | ೨೨(೪೨.೩೦) |
| ಆ. | ನೀರಾವರಿ | ೦೨(೩.೮೪) | ೧(೧.೯೨) | ೩(೫೭.೬) |
| ಇ. | ಎರಡು | ೦೨೧(೩.೮೪) | ೧(೧.೯೨) | ೩(೫.೭೬) |

ನಮೂನೆಯಲ್ಲಿ ೪೪.೧೫ರಷ್ಟು ಭೂ ರಹಿತರಿದ್ದರೆ ಶೇ ೫೩.೩೪ ಭೂಮಿ ಉಳ್ಳವರಿದ್ದಾರೆ. ಇದರಲ್ಲಿ ಶೇ ೪೨.೩೦ರಷ್ಟು ಫಲಾನುಭವಿಗಳು ಖುಷ್ಕಿ ಜಮೀನನ್ನು ಹೊಂದಿದವರೇ ಹೆಚ್ಚು ಇದ್ದಾರೆ. ಉಳಿದ ಶೇ ೧೧.೪೨ ರಷ್ಟು ಎರಡು ವಿಧದ ಭೂಮಿ ಹೊಂದಿದವರು ಇದ್ದಾರೆ. ಭೂಮಿಯಿಂದ ಆದಾಯ ಬರುವ ಫಲಾನುಭವಿ ಕುಟುಂಬಗಳು ಯೋಜನೆಯ ಸಾಲದ ಹಣಕ್ಕೆ ತಮ್ಮ ಹಣವನ್ನು ಸೇರಿಸಿ ಚಟುವಟಿಕ ನಡೆಸುತ್ತಿದ್ದಾರೆ. ಭೂಮಿ ಇದ್ದರೂ ಅದರಿಂದ ಆದಾಯ ಗಳಿಸದ ಕುಟುಂಬಗಳೇ ಹೆಚ್ಚು.

## ಅಧ್ಯಾಯ:೩

### ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆ: ಪ್ರಕ್ರಿಯೆ ಹಾಗೂ ಪರಿಣಾಮಗಳ ಅಧ್ಯಯನ:

ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯು ಅನುಷ್ಠಾನಗೊಳ್ಳುವ ಪ್ರಕ್ರಿಯೆ ಹಾಗೂ ಅದರಿಂದ ಫಲಾನುಭವಿಗಳಮೇಲೆ ಉಂಟಾಗುವ ಪರಿಣಾಮಗಳನ್ನು ಕ್ಷೇತ್ರ ಕಾರ್ಯದ ಮೂಲಕ ಸಂಗ್ರಹಿಸಿದ ಮಾಹಿತಿಯ ಆಧಾರದ ಮೇಲೆ ವಿಶ್ಲೇಷಿಸಲು ಇಲ್ಲಿ ಪ್ರಯತ್ನಿಸಲಾಗಿದೆ. ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯ ಅನುಷ್ಠಾನ ಪ್ರಕ್ರಿಯೆಯು ಅನೇಕಅಂಶಗಳನ್ನು ಒಳಗೊಂಡಿದೆ. ಮೊದಲನೆಯದಾಗಿ ಫಲಾನುಭವಿಗಳ ಆಯ್ಕೆ. ಇದಕ್ಕೆ ಯೋಜನೆಯಲ್ಲೇ ಕೆಲವುನಿಬಂಧನೆಗಳಿವೆ. ಆಯ್ಕೆಯಾದ ಫಲಾನುಭವಿಗಳಿಗೆ ಯೋಜನೆಯ ಬಾಬ್ತು ಬ್ಯಾಂಕುಗಳು ಸಾಲ ನೀಡಬೇಕಾಗುತ್ತದೆ. ಇಲ್ಲಿ ಆಯ್ಕೆಯಾದ ಫಲಾನುಭವಿಗಳಿಗೆ ಇಂತಿಷ್ಟು ಕಾಲಾವಧಿಯಲ್ಲಿ ಸಾಲದ ಮೊತ್ತ ಕೈಸೇರಬೇಕುಎಂಬುದಿದೆ. ಈ ಎಲ್ಲಾ ಅಂಶಗಳು ಅನುಷ್ಠಾನ ಪ್ರಕ್ರಿಯೆಯಲ್ಲಿ ಸೇರುತ್ತವೆ.

ಫಲಾನುಭವಿಗಳ ಆಯ್ಕೆಯ ವಿಧಾನ ಹಾಗೂ ಯೋಜನೆಯಲ್ಲಿ ಬ್ಯಾಂಕುಗಳ ಪಾತ್ರವನ್ನು ವಿಶ್ಲೇಷಿಸಲು ನಾವು ಅನೇಕ ಮಾಹಿತಿ ಸಂಗ್ರಹಿಸಿದ್ದೇವೆ. ಈ ಮಾಹಿತಿಯ ಆಧಾರದ ಮೇಲೆ ಹಗರಿಬೊಮ್ಮನಹಳ್ಳಿ ತಾಲ್ಲೂಕಿನಲ್ಲಿ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯ ಫಲಾನುಭವಿಗಳನ್ನು ಗ್ರಾಮಸಭೆ ಮೂಲಕ ಆಯ್ಕೆ ಮಾಡಲಾಗುತ್ತಿದೆಯೆ ಹೇಗೆ? ಪರಿಶಿಷ್ಟಜಾತಿ, ಪರಿಶಿಷ್ಟ ವರ್ಗ ಹಾಗೂ ಮಹಿಳೆಯರಿಗೆ ಯೋಜನೆಯಲ್ಲಿ ನಿಗದಿಪಡಿಸಿರುವ ಪ್ರಮಾಣದಲ್ಲಿ ಅವಕಾಶ ನೀಡಲಾಗಿದೆಯೆ ಹೇಗೆ? ಬ್ಯಾಂಕುಗಳ ಪಾತ್ರವೇನು? ಮುಂತಾದ ಪ್ರಶ್ನೆಗಳನ್ನು ವಿವರಿಸಲು ಇಲ್ಲಿ ಪ್ರಯತ್ನಿಸಲಾಗಿದೆ. ಈ ಅಧ್ಯಾಯದ ಮೊದಲ ಭಾಗದಲ್ಲಿ ಪ್ರಕ್ರಿಯೆಯ ಮೌಲ್ಯಮಾಪನದ ವಿವರಣೆಯೂ,ಎರಡನೆಯ ಭಾಗದಲ್ಲಿ ಪರಿಣಾಮಗಳ ಮೌಲ್ಯ ಮಾಪನದ ವಿವರಣೆಯೂ ಇದೆ. ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯಿಂದಾಗಿ ಫಲಾನುಭವಿಗಳ ವರಮಾನದಲ್ಲಿ ಉಂಟಾದ ಬದಲಾವಣೆಗಳೇನು? ಯೋಜನೆಯಡಿಯಲ್ಲಿ ಫಲಾನುಭವಿಗಳು ಮಾಡಿಕೊಂಡ 'ಆಸ್ತಿ' ಗಳಾವುವು? ಈ ಯೋಜನೆಯಿಂದಾಗಿ ಉದ್ಯೋಗದ ಅವಕಾಶಗಳು ವಿಸ್ತೃತಗೊಂಡಿದ್ದಾವೆಯೆ? ಏಕರೂಪ ರಚನೆಯು ಬಹುರೂಪ ರಚನೆ ಯಾಗಿ ಮಾರ್ಪಾಡಾಗುತ್ತಿದೆಯೆ? ಈ ಯೋಜನೆಯ ನೆರವಿನಿಂದಾಗಿ ಫಲಾನುಭವಿಗಳ ಬದುಕು ಸ್ವಯಂ ಪೋಷಿತವಾಗುತ್ತಿದೆಯೆ? ಇವೇ ಮುಂತಾದ ಪರಿಣಾಮ ಸಂಬಂಧಿ ಸಂಗತಿಗಳನ್ನು ಇಲ್ಲಿ ವಿಶ್ಲೇಷಿಸಲಾಗಿದೆ.

ಭಾಗ - ೧

**ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯ ಅನುಷ್ಠಾನ ಪ್ರಕ್ರಿಯೆಯ ಅಧ್ಯಯನ**

ಈ ಭಾಗದಲ್ಲಿ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯು ನಮ್ಮ ಅಧ್ಯಯನ ಕ್ಷೇತ್ರವಾದ ಹಗರಿಬೊಮ್ಮನಹಳ್ಳಿ ತಾಲ್ಲೂಕಿನಲ್ಲಿ ಯಾವ ವಿಧದಲ್ಲಿ ಅನುಷ್ಠಾನಗೊಳ್ಳುತ್ತಿದೆ ಎಂಬುದನ್ನು ಪರಿಶೀಲಿಸಲಾಗಿದೆ.

**೩.೧.೧. ಫಲಾನುಭವಿಗಳನ್ನು ಆಯ್ಕೆ ಮಾಡುವ ವಿಧಾನ**

ಸಮಗ್ರ ಗ್ರಾಮೀಣಾಭಿವೃದ್ಧಿ ಯೋಜನೆಗೆ ಫಲಾನುಭವಿಗಳನ್ನು ಆಯ್ಕೆ ಮಾಡಲು ಗ್ರಾಮ ಸಭೆಗಳನ್ನು ಕರೆಯಲಾಗುತ್ತದೆ.ಈ ಯೋಜನೆಯಲ್ಲದೆ ಅನೇಕ ಇತರೆ ಅಭಿವೃದ್ಧಿ ಯೋಜನೆಗಳಿಗೂ ಫಲಾನುಭವಿಗಳನ್ನು ಆಯ್ಕೆ ಮಾಡುವ ಅಧಿಕಾರ ಗ್ರಾಮ ಸಭೆಗೆ ಇದೆ. ಗ್ರಾಮ ಸಭೆ ಎಂದರೆ: ಗ್ರಾಮ ಪಂಚಾಯತಿಯ ಪ್ರದೇಶದೊಳಗೆ ಸೇರಿರುವ ಗ್ರಾಮಕ್ಕೆ ಸಂಬಂಧಿಸಿದಮತದಾರರ ಪಟ್ಟಿಯಲ್ಲಿ ನೊಂದಾಯಿತ ಮತದಾರರ ಒಂದು ಮಂಡಲಿ (ಹೊಸಮನಿ ೧೯೯೩ ಪುಟ ೪).

ಇಂದು ನಾವು ಪರೋಕ್ಷ ಪ್ರಜಾಪ್ರಭುತ್ವ ಪದ್ಧತಿಯಿಂದ ಆಡಳಿತ ನಡೆಸುತ್ತಿದ್ದೇವೆ. ಕೆಲವೊಂದು ಸಂದರ್ಭದಲ್ಲಿ ಇದು ಪಕ್ಷಪಾತಿಯಾಗಬಹುದು ಎಂಬ ಹಿನ್ನೆಲೆಯಲ್ಲಿ ಗ್ರಾಮಸಭೆಗಳನ್ನು ಅಸ್ತಿತ್ವದಲ್ಲಿ ತರಲಾಗಿದೆ. ಗ್ರಾಮ ಸಭೆಗಳಲ್ಲಿ ಎಲ್ಲಾ ಸದಸ್ಯರು (ಮತದಾರರು) ಭಾಗವಹಿಸುವುದರಿಂದ ಪಕ್ಷಪಾತವಾಗುವುದು ಕಡಿಮೆ. ಗ್ರಾಮ ಸಭೆಯು ಪ್ರತ್ಯಕ್ಷ ಪ್ರಜಾಪ್ರಭುತ್ವದ ಘಟಕವಾಗಿದೆ. ಈ ಹಂತದಲ್ಲಿ ಫಲಾನುಭವಿಗಳನ್ನು ಆಯ್ಕೆ ಮಾಡಲಾಗುವುದು. ಒಂದು ವೇಳೆ ಗ್ರಾಮ ಸಭೆಯು ಸಕಾಲದಲ್ಲಿ ಫಲಾನುಭವಿಗಳನ್ನು ಗುರುತಿಸದಿದ್ದಲ್ಲಿ ತಾಲ್ಲೂಕು ಕಾರ್ಯ ನಿರ್ವಾಹಕ ಅಧಿಕಾರಿಯು (ಈಗ ಕ್ಷೇತ್ರಾಭಿವೃದ್ಧಿ ಅಧಿಕಾರಿ BDO) ಗ್ರಾಮ ಪಂಚಾಯಿತಿಯೊಂದಿಗೆ ಸಮಾಲೋಚಿಸಿ ಫಲಾನುಭವಿಗಳನ್ನು ಗುರುತಿಸತಕ್ಕದ್ದು ಎಂದು ೧೯೯೩ರ ಪಂಚಾಯತ್ ರಾಜ್ ಅಧಿನಿಯಮದಲ್ಲಿ ಹೇಳಲಾಗಿದೆ. ಅಧಿನಿಯಮದಲ್ಲಿ ಮೊದಲು ಗ್ರಾಮಸಭೆಗೆ ಆದ್ಯತೆ ಕೊಡಲಾಗಿದೆ. ಗ್ರಾಮಸಭೆಯಿಂದ ಫಲಾನುಭವಿಗಳು ಆಯ್ಕೆಯಾಗದಿದ್ದ ಪಕ್ಷದಲ್ಲಿ ಕಾರ್ಯನಿರ್ವಾಹಕ ಅಧಿಕಾರಿಗೆ ಫಲಾನುಭವಿಗಳನ್ನು ಆಯ್ಕೆ ಮಾಡುವ ಅಧಿಕಾರವನ್ನು ನೀಡಲಾಗಿದೆ.

ಪ್ರಸ್ತುತ ಕ್ಷೇತ್ರಕಾರ್ಯದಲ್ಲಿ ಯಾವ ರೀತಿಯಲ್ಲಿ ಗ್ರಾಮ ಸಭೆಗಳು ನಡೆಯುತ್ತಲಿವೆ ಎಂಬುದನ್ನು ಪರಿಶೀಲಿಸಲಾಗಿದೆ. ಏಕೆಂದರೆ ಯೋಜನೆಗೆ ಫಲಾನುಭವಿಗಳನ್ನು ಆಯ್ಕೆ ಮಾಡುವುದು ಯೋಜನೆಯ ಮೊದಲ

ಪ್ರಮುಖವಾದ ಕೆಲಸವಾಗಿದೆ. ಇಲ್ಲಿ ಅರ್ಹರಾದ ಫಲಾನುಭವಿಗಳು ಆಯ್ಕೆಯಾಗುತ್ತಿದ್ದಾರೊ ಇಲ್ಲವೊ ಎಂಬುದನ್ನು ತಿಳಿದುಕೊಳ್ಳಲಾಗಿದೆ. ನಾವು ಸಂದರ್ಶಿಸಿದ ಹಳೆಯ ಫಲಾನುಭವಿಗಳು ನಮಗೆ ತಪ್ಪಾದ ಮಾಹಿತಿ ನೀಡಬಹುದಾಗಿದೆ. ನಮ್ಮ ನಮೂನೆಯಲ್ಲಿ ಯಾವ ರೀತಿಯಲ್ಲಿ ಫಲಾನುಭವಿಗಳು ಆಯ್ಕೆಯಾಗಿದ್ದಾರೆ ಮತ್ತು ನಿಜವಾಗಿ ಏನು ನಡೆಯುತ್ತಲಿದೆ ಎಂಬುದನ್ನು ನೋಡಬಹುದು. ಕ್ಷೇತ್ರ ಕಾರ್ಯದಲ್ಲಿ ಹತ್ತು ಪುರುಷ ಹಾಗು ಮಹಿಳಾ ಪಂಚಾಯತಿ ಅಧ್ಯಕ್ಷರುಗಳನ್ನು ಸಂದರ್ಶಿಸಲಾಗಿದೆ. ಇವರು, ಕಾರ್ಯನಿರ್ವಾಕಹಕ ಅಧಿಕಾರಿ ಮತ್ತು ಬ್ಯಾಂಕ್ ಅಧಿಕಾರಿಗಳನ್ನು ಒಳಗೊಂಡ ಸಮಿತಿ ಗ್ರಾಮಸಭೆಗಳಲ್ಲಿ ಫಲಾನುಭವಿಗಳನ್ನು ಗುರುತಿಸುತ್ತದೆ. ಈ ರೀತಿಯಾಗಿ ನಡೆಸುವಾಗ ಫಲಾನುಭವಿಗಳು ಈ ಮುಂದಿನಂತೆ ಆಯ್ಕೆಗೊಂಡಿರುವುದು ಕಂಡು ಬರುತ್ತದೆ.

ಕೋಷ್ಟಕ:೩.೧ ಫಲಾನುಭವಿಗಳು ಆಯ್ಕೆಯಾದ ವಿಧಾನ:-

| ಸಂ.. | ವಿಧಾನ | ಪುರುಷ | ಮಹಿಳೆ | ಒಟ್ಟು |
|---|---|---|---|---|
| ೧ | ಗ್ರಾಮ ಸಭೆಯಿಂದ | ೨೪.(೪೬.೧೫) | ೧೨ (೨೩.೦೭) | ೩೬ (೬೯.೨೩) |
| ೨. | ಗ್ರಾಮ ಪಂಚಾಯತಿ ಸದಸ್ಯರು | ೮.(೧೫.೩೮) | ೬ (೧೧.೫೩) | ೧೪(೨೬.೯೨) |
| ೩. | ಅಧಿಕಾರಿಗಳಿಂದ | ೧ (೧.೯೨) | ೧ (೧.೯೨) | ೨ (೩.೮೪) |
| | ಒಟ್ಟು | ೩೩ | ೧೯ | ೫೨ |

ಮೇಲಿನ ಕೋಷ್ಟಕದ ಮಾಹಿತಿಯನ್ನು ಫಲಾನುಭವಿಗಳಿಂದ ಸಂಗ್ರಹಿಸಿದ್ದು. ಅವರ ಆಯ್ಕೆಯ ವಿಧಾನವನ್ನು ಈ ರೀತಿಯಲ್ಲಿ ವಿವರಿಸಬಹುದು. ಒಟ್ಟು ಫಲಾನುಭವಿಗಳಲ್ಲಿ ಶೇ ೬೯.೨೩ ರಷ್ಟು ಫಲಾನುಭವಿಗಳು ಗ್ರಾಮ ಸಭೆಯಿಂದ ಆಯ್ಕೆಯಾಗಿದ್ದಾರೆ ಎಂದು ಹೇಳಲಾಗಿದೆ. ಇಲ್ಲಿರುವ ಕುಟುಂಬಗಳು ಮೂವತ್ತಾರು. ಇದರಲ್ಲಿ ೨೪ (ಶೇ.೪೬.೧೫) ಪುರುಷ ಮತ್ತು ೧೨ (ಶೇ.೨೩.೦೭) ಮಹಿಳಾ ಫಲಾನುಭವಿ ಕುಟುಂಬಗಳು ಸೇರಿವೆ. ಅತಿ ಹೆಚ್ಚು ಭಾಗ ಗ್ರಾಮ ಸಭೆಯಿಂದ ಆಯ್ಕೆಯಾಗುತ್ತಿದ್ದಾರೆ. ಶೇ ೨೬.೯೨ ರಷ್ಟು ಅಂದರೆ ೧೪ ಫಲಾನುಭವಿ ಕುಟುಂಬಗಳು ಗ್ರಾಮ ಪಂಚಾಯತಿ ಸದಸ್ಯರು ಹೇಳಿದ್ದರಿಂದ ಆಯ್ಕೆಯಾಗಿದ್ದಾರೆ. ಇವರಲ್ಲಿ ೮ (ಶೇ ೧೫.೩೮) ಪುರುಷ ಮತ್ತು ೬ (ಶೇ ೧೧.೫೩) ಮಹಿಳಾ ಫಲಾನುಭವಿಗಳೂ ಸೇರಿದ್ದಾರೆ. ಈ ಒಂದು ಹಂತದಲ್ಲಿ ಬರುವ ಫಲಾನುಭವಿಗಳು ಬಡವರಾಗಿದ್ದರೂ ಗ್ರಾಮ ಪಂಚಾಯತಿ ಸದಸ್ಯರೊಡನೆ ಉತ್ತಮ ಬಾಂದವ್ಯವನ್ನು ಇಟ್ಟು ಕೊಂಡಿರುತ್ತಾರೆ. ಗ್ರಾಮ ಪಂಚಾಯತಿ ಸದಸ್ಯರು ಬಡವರನ್ನು ಗುರುತಿಸುವಾಗ 'ಬಡವರಲ್ಲಿ ಬಡವರನ್ನು' ಆರಿಸಬೇಕಾಗುತ್ತದೆ. ಇಂತಹ ಬಡವರಿಗೆ ಮೊದಲು ಆದ್ಯತೆ ನೀಡಬೇಕು ಎಂದು ಯೋಜನೆಯಲ್ಲಿ (singh, Kattar ೧೯೯೫) ಹೇಳಲಾಗಿದೆ. ಗ್ರಾಮ ಪಂಚಾಯತಿ ಸದಸ್ಯರು ಶಿಫಾರಸ್ಸು ಮಾಡಿದ ಫಲಾನುಭವಿಯು ಅತಿ ಬಡವರು ಎಂದು ಹೇಳಲಾಗುವುದಿಲ್ಲ. ಸಾಮಾನ್ಯವಾಗಿ ಗ್ರಾಮ ಪಂಚಾಯತಿ

ಸದಸ್ಯರು ತಮ್ಮ ಹಿಂಬಾಲಿಕರಿಗೆ ಹೆಚ್ಚು ಆದ್ಯತೆ ಕೊಡುತ್ತಾರೆಯೇ ಹೊರತು ಅಂತ್ಯಜರಿಗಲ್ಲ. ಅಧಿಕಾರಿಗಳಿಂದ ಬಹಳ ಕಡಿಮೆ ಮಟ್ಟದಲ್ಲಿ ಅಂದರೆ ಶೇ ೩.೯ಳ ರಷ್ಟು ಮಾತ್ರ ಆಯ್ಕೆಯಾಗುತ್ತಿದ್ದಾರೆ. ಫಲಾನುಭವಿಗಳನ್ನು ಗುರುತಿಸುವಲ್ಲಿ ಅಧಿಕಾರಿಗಳ ಪ್ರಭಾವ ಅಷ್ಟಾಗಿ ಕಾಣುತ್ತಿಲ್ಲ.

ಇಂತಹ ಸಮಸ್ಯೆಗಳನ್ನು ನಾವು ಇತರ ಅಧ್ಯಯನಗಳಲ್ಲೂ ಕಾಣುತ್ತೇವೆ. ( Balistar ೧೯೯೧) ಅವರ ಅಧ್ಯಯನದಲ್ಲೂ ಮತ್ತು ೬ನೇ ಪಂಚವಾರ್ಷಿಕ ಯೋಜನೆಯನ್ನು ಅಭ್ಯಸಿಸಿದ RBI,NABARD, NIRD ಗಳು ಶೇ ೨೦ರಿಂದ ೨೫ರಷ್ಟು ಅರ್ಹರಲ್ಲದವರಿಗೆ ಯೋಜನೆಯಲ್ಲಿ ಫಲದೊರೆತಿದೆ ಎಂದು ತಿಳಿಯುತ್ತದೆ. ನಮ್ಮ ಅಧ್ಯಯನದಲ್ಲಿಯೂ ಬಡತನರೇಖೆಯ ಕೆಳಗಡೆ ಬರದಿದ್ದರೂ ಗ್ರಾಮ ಸಭೆಯಿಂದ ಆಯ್ಕೆಯಾಗದಿದ್ದರೂ ಯೋಜನೆಯಲ್ಲಿ ಸಹಾಯ ಪಡೆದಿದ್ದಾರೆ.

ಸಮಾಜದಲ್ಲಿರುವ ಅಂತ್ಯಜ ರಿಗೆ ಮೊದಲು ಯೋಜನೆಯ ಫಲ ಸಿಗಬೇಕು ಎನ್ನುವುದನ್ನು ಯೋಜನೆಯು ನಿರ್ದೇಶಿಸಿದೆ.ಆದರೆ ಇಂದು ಗ್ರಾಮಸಭೆಗಳು ಪರಿಣಾಮಕಾರಿಯಾಗಿ ನಡೆಯದೆ ಇರುವುದರಿಂದ ಅರ್ಹ ಫಲಾನುಭವಿಗಳು ಯೋಜನೆಯ ಫಲದಿಂದ ವಂಚಿತರಾಗುತ್ತಿದ್ದಾರೆ. ಗ್ರಾಮ ಸಭೆಯಿಂದ ಆಯ್ಕೆಯಾದ ಶೇ ೬೯.೨೩ ರಷ್ಟು ಫಲಾನುಭವಿಗಳಲ್ಲಿಯೂ ಸಹಾ ಕೆಲವರು ಬಡತನ ರೇಖೆಯ ಮೇಲೆ ಬಂದರೂ ಅವರು ಬಡವರೆಂದು ದಾಖಲೆಯಲ್ಲಿ ನಮೂದಿಸಿ ಕೊಂಡಿದ್ದಾರೆ. ಇಂತವರು ಗ್ರಾಮ ಸಭೆಗಳಿಂದ ಆಯ್ಕೆಯಾಗಿದ್ದಾರೆ. ಇಂತಹ ಪರಿಸ್ಥಿತಿ ತಪ್ಪಿಸಬೇಕಾದರೆ ಗ್ರಾಮಸಭೆಗಳು ಯಶಸ್ವಿಯಾಗಿ ನಡೆಯಬೇಕು. ಗ್ರಾಮ ಸಭೆಯು ಯಶಸ್ವಿಯಾಗಿ ನಡೆಯ ಬೇಕೆಂದರೆ ಎಲ್ಲಾ ವರ್ಗದ ಜನರಿಗೆ ತಿಳುವಳಿಕೆ ಅತ್ಯಗತ್ಯ.

ಗ್ರಾಮ ಸಭೆಯ ಅಧ್ಯಕ್ಷತೆ ವಹಿಸುವವನು ಗ್ರಾಮ ಪಂಚಾಯಿತಿಯ ಅಧ್ಯಕ್ಷ, ಉಪಾಧ್ಯಕ್ಷ ಅಥವ ಸದಸ್ಯನಿರುತ್ತಾನೆ. ಇವರುಗ್ರಾಮ ಸಭೆಯು ಸಲಹೆ ಮಾಡಿದ ಫಲಾನುಭವಿಗಳನ್ನು ಆಯ್ಕೆಮಾಡುವುದು ಅವರ ಕರ್ತವ್ಯವಾಗಿರುತ್ತದೆ. ಆದರೆಇಲ್ಲಿಯೂ ಸಹ ಗ್ರಾಮ ಪಂಚಾಯಿತಿಯ ಸದಸ್ಯರು ತಮ್ಮ ಹಿಂಬಾಲಿಕರಿಗೆ ಸಾಲ ಕೊಡಿಸುವಲ್ಲಿ ಯಶಸ್ವಿಯಾಗುತ್ತಿದ್ದಾರೆ. ಒಂದು ಊರಿನಲ್ಲಿ ಒಂದು ವರ್ಷದಲ್ಲಿ ಕೆಲವೇ ಜನರಿಗೆ ಸಾಲವನ್ನು ಕೊಡುವುದರಿಂದ ಎಲ್ಲಾಬಡವರಿಗೂ ಯೋಜನೆಯ ಸಾಲ ಸಿಗುವುದಿಲ್ಲ.ಮತ್ತು ೨-೩ ವರ್ಷಗಳ ವರೆಗೆ ಆ ಊರಿಗೆ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯಡಿಯಲ್ಲಿ ಸಾಲ ಕೊಡುವುದಿಲ್ಲ. ಹೀಗಾಗಿ ಅವಕಾಶ ಬಂದಾಗ ಗ್ರಾಮ ಪಂಚಾಯಿತಿ ಸದಸ್ಯರು ತಮ್ಮ ಹಿಂದಿರುವ ಹಿಂಬಾಲಿಕರಿಗೆ ಸಾಲ ಕೊಡಿಸುತ್ತಿದ್ದಾರೆ.

ಜನರು ಇಂದು ಸಮಾಗ್ರ ಗ್ರಾಮೀಣಾಭಿವೃದ್ಧಿ ಸಾಲ ಯೋಜನೆಯು ರಾಜಕೀಯ ವ್ಯಕ್ತಿಗಳ ಮುತುವರ್ಜಿಯಿಂದ ದೊರೆಯುವುದು ಎಂದು ತಿಳಿದಿದ್ದಾರೆ. ಇಂತಹ ರೀತಿಯ ತಿಳುವಳಿಕೆಗಳು ಜನತೆಯಿಂದ

ಮಾಯವಾಗಲು ಅವರಿಗೆಶಿಕ್ಷಣವು ಅತ್ಯಗತ್ಯವಾಗಿದೆ. ಮತ್ತು ಯೋಜನೆಗಳ ಬಗ್ಗೆ ಸಾಮಾನ್ಯ ತಿಳುವಳಿಕೆಯು ಅವಶ್ಯಕವಾಗಿದೆ.

**೩.೧.೨ ಯೋಜನೆಯ ಕಾರ್ಯನುಷ್ಠಾನ:**

ಗ್ರಾಮ ಸಭೆಗಳಲ್ಲಿ ಫಲಾನುಭವಿಗಳನ್ನು ಆಯ್ಕೆ ಮಾಡಿದ ನಂತರ ಅವರಿಗೆ ಭೌತಿಕ ಸರಕುಗಳನ್ನು ಖರೀದಿಸುವ ವ್ಯವಸ್ಥೆ ಮಾಡಲಾಗುತ್ತದೆ. ಗ್ರಾಮ ಸಭೆಯು ಮುಗಿದ ಒಂದು ವಾರದಲ್ಲಿ ಬ್ಯಾಂಕ್ ಅಧಿಕಾರಿಗಳು ಆಯ್ಕೆಯಾದ ಎಲ್ಲಾಕುಟುಂಬಗಳಿಗೆ ಸಾಲ ಮುಂಜುರಾತಿಗಾಗಿ ಬೇಕಾದ ಎಲ್ಲಾ ಸಾಲ ಪತ್ರಗಳನ್ನು ಸಿದ್ಧಪಡಿಸಿ, ಸಾಲ ಮಂಜೂರು ಮಾಡಿಸಹಾಯ ಧನ ಪತ್ರಗಳನ್ನು ಕ್ಷೇತ್ರಾಭಿವೃದ್ಧಿ ಅಧಿಕಾರಿಗಳಿಗೆ (ಈಗ ಕರ್ನಾಟಕ ಪಂಚಾಯಿತ್ ರಾಜ್ ಅಧಿನಿಯಮ ೧೯೯೩ಪ್ರಕಾರ ಕಾರ್ಯನಿರ್ವಾಹಕ ಅಧಿಕಾರಿಗೆ) ಕಳುಹಿಸಿ ಕೊಡುತ್ತಾರೆ. ಸರಕಾರದ ಸಹಾಯ ಧನ ಮಂಜುರಾತಿ ಪತ್ರ ಮುಟ್ಟಿದ ನಂತರ ಹದಿನೈದು-ಇಪ್ಪತ್ತು ದಿನಗೊಳಗಾಗಿ ಬ್ಯಾಂಕ್ ಅಧಿಕಾರಿಗಳು ಎಲ್ಲಾ ಸಾಲಗಳನ್ನು ವಿತರಣೆ ಮಾಡಿಭೌತಿಕ ಸರಕುಗಳನ್ನು ಖರೀದಿಸುವ ವ್ಯವಸ್ಥೆ ಮಾಡುತ್ತಾರೆ. (ನಾರಪ್ಪನವರ ೧೯೯೧).

ಗ್ರಾಮಗಳಲ್ಲಿ ಸಾಮಾನ್ಯವಾಗಿ ಕೂಲಿ ಕೆಲಸಗಳಿಂದ ಜೀವನ ಸಾಗಿಸುವವರು ಹೆಚ್ಚು. ಬ್ಯಾಂಕ್ ಅಧಿಕಾರಿಗಳು ಮತ್ತುಸರಕಾರಿ ಅಧಿಕಾರಿಗಳು ಗ್ರಾಮ ಸಭೆಯಲ್ಲಿ ಫಲಾನುಭವಿಗಳನ್ನು ಆಯ್ಕೆಮಾಡಿದ ನಂತರ ಬೇಗನೆ ಭೌತಿಕ ಸರಕುಗಳನ್ನು ಖರೀದಿಸುವ ವ್ಯವಸ್ಥೆ ಮಾಡುವುದಿಲ್ಲ. ಇದರಿಂದ ಕೂಲಿಯಿಂದಲೇ ಜೀವನ ಸಾಗಿಸುವ ಜನರು ತಮ್ಮ ಕೂಲಿಯನ್ನು ಬಿಟ್ಟು ಬ್ಯಾಂಕುಗಳಿಗೆ ಅಲೆಯುತ್ತಿದ್ದಾರೆ. ಮತ್ತು ಸಂಬಂಧಿಸಿದ ಅಧಿಕಾರಿಗಳನ್ನು ಕಾಣಲು ಸಮಯವ್ಯರ್ಥವಾಗುತ್ತಿದೆ.ಎಂದು ಫಲಾನುಭವಿಗಳು ನೋವಿನಿಂದ ಉತ್ತರಿಸುತ್ತಿದ್ದಾರೆ.

ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯಡಿಯಲ್ಲಿ ಆಯ್ಕೆಯಾದ ಫಲಾನುಭವಿಗಳಿಗೆ ಸಾಲವನ್ನು ಹಣ ವಸ್ತುರೂಪದಲ್ಲಿಕೊಡುತ್ತಾರೆ. ವ್ಯಾಪಾರ ಮತ್ತು ಗುಡಿ ಕೈಗಾರಿಕೆಗಳಿಗೆ ಸಂಬಧಿಸಿದ ಯೋಜನೆಗಳಿಗೆ ಹಣದ ರೂಪದಲ್ಲಿ ಕೊಟ್ಟರೆವ್ಯವಸಾಯ, ಹೈನುಗಾರಿಕೆ ಇಂತಹವುಗಳಿಗೆ ಸಂಬಂಧಿಸಿದ ಯೋಜನೆಗಳಿಗೆ ಸಾಲವನ್ನು ವಸ್ತುವಿನ ರೂಪದಲ್ಲಿ ಕೊಡುತ್ತಾರೆ.ವ್ಯಾಪಾರ ಮತ್ತು ಕರಕುಶಲ, ಗುಡಿ ಕೈಗಾರಿಕೆ ಸಾಲಗಳನ್ನು ಕೊಡುವಾಗ ಸಂಬಂಧಿಸಿದ ಸಂಸ್ಥೆಗೆ ಬ್ಯಾಂಕ್ ಹಣದ ಮೂಲಕ ಕೊಡುತ್ತಾರೆ. ವ್ಯವಸಾಯ ಚಟುವಟಿಕೆಗಳಿಗೆ ಸಾಲ ಕೊಡುವಾಗ ಬ್ಯಾಂಕ್ ಅಧಿಕಾರಿಗಳುನೇರವಾಗಿ ಸಂಬಂಧಿಸಿದ ಪರಿಣಿತರೊಡನೆ ಸಮಾಲೋಚಿಸಿ ಆಸ್ತಿಗಳನ್ನು ಕೊಡಿಸುತ್ತಾರೆ. ಉದಾ:- ಈಗ ಒಬ್ಬ ಫಲಾನುಭವಿಗೆ ಹೈನುಗಾರಿಕೆಗೆ ಹಸುವನ್ನು ಕೊಡಿಸಬೇಕಾದಾಗ ಒಬ್ಬ ಪಶುವೈದ್ಯನನ್ನು ಕರೆದು ಕೊಂಡು ಬಂದು ಅವನ ಸಮ್ಮುಖದಲ್ಲಿ ಹಸು

ಆರೋಗ್ಯವಾಗಿದೆಯೇ ಇಲ್ಲವೊ ಎಂಬುದನ್ನು ದೃಢಪಡಿಸಿದ ನಂತರ ಆ ಹಸುವನ್ನು ಕೊಳ್ಳಲಾಗುವುದು. ಇದೇ ರೀತಿಯಲ್ಲಿ ಇನ್ನುಳಿದ ಫಲಾನುಭವಿಗಳಿಗೆ ಭೌತಿಕ ಸರಕುಗಳನ್ನು ಖರೀದಿಸುವ ವ್ಯವಸ್ಥೆ ಮಾಡಲಾಗುವುದು.

ವ್ಯವಸ್ಥೆ ಹೀಗಿರುವಾಗ ನಮ್ಮ ಅಧ್ಯಯನದ ಫಲಾನುಭವಿ ಕುಟುಂಬಗಳಿಗೆ ಯಾವ ಕಾಲಾವದಿಯಲ್ಲಿ ಸಾಲವು ದೊರಕುತ್ತಲಿವೆ. ಎಂಬುದನ್ನು ನೋಡಬಹುದಾಗಿದೆ.

ಕೋಷ್ಟಕ:೩.೨: ಆಯ್ಕೆಯಾದ ಫಲಾನುಭವಿಗಳಿಗೆ ಸಾಲಕೈಗೆಸಿಗುವ ಸಮಯ:

| ಸಂ. | ಅವಧಿ | ಪುರುಷ | ಮಹಿಳೆ | ಒಟ್ಟು |
|---|---|---|---|---|
| ೧ | ೧೦೦ದಿನಕ್ಕೆ | ೮(೧೫.೩೮) | ೩(೭.೬೯) | ೧೧(೨೧.೧೫) |
| ೨ | ೨೦೦ದಿನಕ್ಕೆ | ೧೪(೨೬.೯೨) | ೫(೯.೬೧) | ೧೯(೩೬.೫೩) |
| ೩ | ೨೫೦ದಿನಕ್ಕೆ | ೦೯(೧೭.೩೦) | ೮(೧೫.೩೮) | ೧೭(೩೨.೬೯) |
| ೪ | ೩೫೦ದಿನಕ್ಕೆ | ೨(೩.೮೪) | ೩(೫.೭೬) | ೫(೯.೬೧) |
| | | ೩೩ | ೧೯ | ೫೨ |

ನಮೂನೆಯಲ್ಲಿರುವ ಐವತ್ತೆರಡು ಕುಟುಂಬಗಳ ಪೈಕಿ ಹನ್ನೊಂದು ಕುಟುಂಬಗಳಿಗೆ (ಶೇ ೨೧.೧೫ರಷ್ಟು) ಆಯ್ಕೆಯಾದ ೧೦೦ದಿನಕ್ಕೆ ಸಾಲವು ದೊರಕುತ್ತಲಿದೆ. ಇದರಲ್ಲಿ ೮(ಶೇ೧೫.೩೮) ಪುರುಷ ಫಲಾನುಭವಿಗಳು ಮತ್ತು ೩(ಶೇ೭.೬೯) ಮಹಿಳಾ ಫಲಾನುಭವಿಗಳೂ ಇದ್ದಾರೆ. ನಂತರದ ಅವಧಿ ೨೦೦ ದಿನದಲ್ಲಿ ಸಾಲ ತೆಗೆದುಕೊಳ್ಳುವವರು ಅತಿ ಹೆಚ್ಚು ಇದ್ದಾರೆ. ಈ ಅವಧಿಯ ಗುಂಪಿನಲ್ಲಿ ೧೯ ಶೇ(೩೬.೫೩) ಕುಟುಂಬಗಳಿದ್ದು ಇದರಲ್ಲಿ ೧೪ ಪುರುಷ ಫಲಾನುಭವಿಗಳು ಮತ್ತು ೫(ಶೇ೯.೬೧) ಮಹಿಳಾ ಫಲಾನುಭವಿಗಳಿದ್ದಾರೆ.

ಆಯ್ಕೆಯಾದ ೨೫೦ ದಿನಗಳ ನಂತರ ೧೭ ಕುಟುಂಬಗಳಿಗೆ (ಶೇ೩೨.೬೯) ಸಾಲ ದೊರಕುತ್ತಲಿದೆ. ಇದರಲ್ಲಿ೯(ಶೇ೧೭.೩೦) ಪುರುಷ ಫಲಾನುಭವಿಗಳು ಮತ್ತು ೮(ಶೇ೧೫.೩೮)ಮಹಿಳಾ ಫಲಾನುಭವಿಗಳಿದ್ದಾರೆ. ದೀರ್ಘ ಕಾಲವಾದ ೩೫೦ ದಿನಗಳಲ್ಲಿ ಒಟ್ಟು ೫ (ಶೇ೯.೬೧) ಕುಟುಂಬಗಳಿಗೆ ಸಾಲವು ದೊರೆಯುತ್ತಲಿದೆ. ಇದರಲ್ಲಿ ಇಬ್ಬರುಪುರುಷ ಫಲಾನುಭವಿಗಳು ಮತ್ತು ಶೇ(೩.೮೪) ಮತ್ತು ೩ಮಹಿಳಾ ಫಲಾನುಭವಿಗಳು ಶೇ(೫.೭೬) ಇದ್ದಾರೆ.

ಒಟ್ಟಾರೆ ನಮೂನೆಯಲ್ಲಿ ಅತಿ ಹೆಚ್ಚು ಕಾಲಾವಧಿಯಾದ ೨೦೦ ರಿಂದ ೨೫೦ ದಿನಗಳಲ್ಲಿ ಒಟ್ಟು ೩೬(ಶೇ ೬೯.೨೨ರಷ್ಟು) ಕುಟುಂಬಗಳಿಗೆ ಸಾಲ ಸಿಗುತ್ತಲಿದೆ. ಇದರಿಂದ ಫಲಾನುಭವಿಗಳು ಅನಾವಶ್ಯಕವಾಗಿ

ದುಡಿಯುವ ಕಾಲ ವ್ಯರ್ಥ ಮಾಡುತ್ತಿದ್ದಾರೆ. ಗ್ರಾಮ ಸಭೆಯಲ್ಲಿ ಆಯ್ಕೆಯಾದ ನಂತರ ಫಲಾನುಭವಿಗಳಿಗೆ ಸರಕಾರಿ ಅಧಿಕಾರಿಗಳಾಗಲಿ, ಬ್ಯಾಂಕ್ ಅಧಿಕಾರಿಗಳಾಗಲಿ ಅಧಿಕೃತವಾಗಿ ತಿಳಿಸುವುದಿಲ್ಲ. ಇಲ್ಲವೆ ಪತ್ರದ ಮೂಲಕ ಕೂಡ ತಿಳಿಸುವುದಿಲ್ಲ. ಫಲಾನುಭವಿಗಳು ತಮ್ಮ ಖರ್ಚಿನಲ್ಲಿ ಬ್ಯಾಂಕ್ ಮತ್ತು ಕಛೇರಿಗಳಿಗೆ ಅಲೆಯುತ್ತಿದ್ದಾರೆ. ಮೊದಲೇ ಕೂಲಿಗಳಿಂದ ಜೀವನ ಸಾಗಿಸುತ್ತಿರುವ ಜನರಿಗೆ ಆ ದಿನದ ಆದಾಯ ಇಲ್ಲದಂತಾಗುತ್ತದೆ ಮತ್ತು ತಿರುಗಾಡಲು ಬೇರೆಯವರಿಂದ ಸಾಲ ಮಾಡಬೇಕಾಗುತ್ತದೆ. ಇದರಿಂದ ಸಾಲ ಸಿಕ್ಕ ನಂತರ ಸಾಲದ ಹಣವನ್ನು ಅನುತ್ಪಾದಕ ಕಾರ್ಯಗಳಿಗಾಗಿ ಬಳಸುವ ಸಾಧ್ಯತೆಯೇ ಹೆಚ್ಚು.

ಈ ರೀತಿಯಲ್ಲಿ ಪಡೆದಿರುವ ಸಾಲಗಳನ್ನು ಫಲಾನುಭವಿಗಳು ಅನುತ್ಪಾದಕ ಚಟುವಟಿಕೆಗಳಿಗೆ ಬಳಸುತ್ತಾರೆ ಎಂಬುದನ್ನುನಾವು ಇತರ ಅಧ್ಯಯನಗಳಿಂದ ತಿಳಿದ ಕೊಂಡಿದ್ದೇವೆ. (Balister ೧೯೯೧ ಮತ್ತು Laxmi devi ೧೯೯೬)NABARD.RBI.NIRD-ಇವರ ಅಧ್ಯಯನದಲ್ಲಿಯೂ ಆಯ್ಕೆಯಾದ ಹದಿನಾಲ್ಕು ತಿಂಗಳುಗಳ ನಂತರ ಸಾಲ ದೊರೆಯುತ್ತದೆ ಎಂದು ಗುರುತಿಸಿದ್ದಾರೆ. ಈ ಅವಧಿಯಲ್ಲಿ ಫಲಾನುಭವಿಗಳು ಭಾಗಶಃ ಮಾತ್ರ ಕೆಲಸಗಳಿಗೆ ಹೋಗುತ್ತಿದ್ದಾರೆ. Balister ಅವರ ಅಧ್ಯಯನದಲ್ಲಿ ಸಾಲದ ಹಣದಲ್ಲಿ ಶೇ ೬೯ರಷ್ಟು ಅನುತ್ಪಾದಕ ಚಟುವಟಿಕೆಯಲ್ಲಿ ಉಪಯೋಗಿಸಿದ್ದಾರೆ ಎಂದು ಕಂಡು ಕೊಂಡಿದ್ದಾರೆ. ಆದರೆ ನಮ್ಮ ಅಧ್ಯಯನದಲ್ಲಿ ಈ ರೀತಿಯ ಫಲಿತಾಂಶಗಳನ್ನು ಕಂಡು ಕೊಂಡಿಲ್ಲ. ನಮ್ಮ ಒಟ್ಟು ಫಲಾನುಭವಿಗಳಲ್ಲಿ ಎಂಟು ಫಲಾನುಭಾವಿಗಳು ಅನುತ್ಪಾದಕ ಚಟುವಟಿಕೆಯಲ್ಲಿ ಉಪಯೋಗಿಸಿದ್ದು ಕಂಡು ಬರುತ್ತದೆ.

ವಿವಿಧ ಫಲಾನುಭವಿಗಳು ಯಾವ ಯಾವ ಕಾರ್ಯಗಳಿಗೆ ಸಾಲದ ಹಣವನ್ನು ಬಳಸುತ್ತಿದ್ದಾರೆ. ಎಂಬುದನ್ನು ನಾವುಕೋಷ್ಟಕ ೩.೩ ದಲ್ಲಿ ನೋಡಬಹುದಾಗಿದೆ.

ಕೋಷ್ಟಕ:೩.೩ಸಾಲದ ಮೊತ್ತವನ್ನು ಫಲಾನುಭವಿಗಳು ಬಳಸುವ ವಿಧಾನ:

| ಸಂ. | ವಿಧಗಳು | ಪುರುಷ | ಮಹಿಳೆ | ಒಟ್ಟು |
|---|---|---|---|---|
| ೧ | ದುಡಿಯುವ ಆಸ್ತಿಕೊಳ್ಳಲು | ೨೮(೫೩.೮೪) | ೧೬(೩೦.೭೦) | ೪೪(೮೪.೬೧) |
| ೨ | ಮನೆ ಖರ್ಚಿಗೆ | ೩(೫.೭೬) | ೧(೧.೯೬) | ೪(೭.೬೯) |
| ೩ | ಹಳೇ ಸಾಲ ತೀರಿಸಲು | -- | -- | -- |
| ೪ | ಇತರೆ | ೨(೩.೮೪) | ೧(೧.೯೨) | ೩(೫.೭೬) |
| ೫ | ೧ ಮತ್ತು ೨ | -- | ೧(೧.೯೨) | ೧(೧.೯೨) |
| | | ೩೩ | ೧೯ | ೫೨. |

ಒಟ್ಟು ೫೨ ಫಲಾನುಭವಿ ಕುಟುಂಬಗಳಲ್ಲಿ ೪೪(ಶೇ೮೪.೬೧) ಕುಟುಂಬಗಳು ಸಾಲದ ಹಣವನ್ನು ದುಡಿಯುವ ಆಸ್ತಿಕೊಳ್ಳಲು ಉಪಯೋಗಿಸುತ್ತಿದ್ದಾರೆ. ಇವರಲ್ಲಿ ೨೮(ಶೇ೫೩.೮೪) ಫಲಾನುಭವಿಗಳು ಪುರುಷರು ಮತ್ತು ೧೬(ಶೇ೩೦.೭೬) ಫಲಾನುಭವಿಗಳು ಮಹಿಳೆಯರಿದ್ದಾರೆ. ಈ ಎಲ್ಲಾ ಕುಟುಂಬಗಳ ಆಸ್ತಿಯು ಇಂದಿನವರಗೂ ಆದಾಯವನ್ನು ಸೃಜಸುತ್ತದೆ ಎಂದು ಹೇಳಲು ಬರುವುದಿಲ್ಲ. ಇದರಲ್ಲಿಯ ವಸ್ತುಗಳಿಂದ ಬರುವ ಆದಾಯ ಅವರ ಕೂಲಿಯಿಂದ ಬರುವ ಆದಾಯಗಳಿಗಿಂತ ಕಡಿಮೆ ಇರುತ್ತದೆಂದು ಫಲಾನುಭವಿ ಕುಟುಂಬಗಳು ಹೇಳುತ್ತಿವೆ.

ನಾಲ್ಕು ಕುಟುಂಬಗಳು (ಶೇ೭.೬೯) ಹಣವನ್ನು ಮನೆ ಖರ್ಚಿಗೆ ಉಪಯೋಗಿಸಿದ್ದಾರೆ. ಕಾರಣ ಸಾಲ ತೆಗೆದುಕೊಂಡಸಂದರ್ಭದಲ್ಲಿಯೇ ಕುಟುಂಬದ ಸದಸ್ಯರು ಆನಾರೋಗ್ಯದಿಂದ ಬಳಲುತಿದ್ದುದರಿಂದ ಅದೇ ಹಣವನ್ನು ಮನೆ ಖರ್ಚಿಗೆ ಉಪಯೋಗಿಸಿದ್ದಾರೆ. ಇದರಿಂದ ನಮಗೆ ತಿಳಿಯುವುದೇನೆಂದರೆ ಗ್ರಾಮಗಳಲ್ಲಿ ಜನತೆ ಆರೋಗ್ಯ ಮೂಲ ಸೌಲಭ್ಯಗಳಿಂದಬಳಲುತಿದ್ದಾರೆ ಎಂದು ತಿಳಿಯುತ್ತಿದೆ. ನಾಲ್ಕು ಕುಟುಂಬಗಳು ಶೇ(೭.೬೯) ಸಾಲದ ಹಣವನ್ನು ಇತರ ಉದ್ದೇಶಗಳಿಗಾಗಿ ಬಳಸುತ್ತಿದ್ದಾರೆ.ಸಾಲ ತೆಗೆದುಕೊಂಡು ಖರ್ಚುಮಾಡಬೇಕೆಂಬ ಉದ್ದೇಶ ಅವರಿಗಿಲ್ಲ. ಆದರೆಪರಿಸ್ಥಿತಿಯ ಅನಿವಾರ್ಯತೆಯಿಂದಾಗಿ ಸಾಲದ ಹಣವನ್ನು ಈ ರೀತಿಯಾಗಿ ಇತರೆ ಉದ್ದೇಶಗಳಿಗಾಗಿ ಉಪಯೋಗಿಸುತ್ತಿದ್ದಾರೆ.

ಆಸ್ತಿಯನ್ನು ಕೊಂಡು ಕೊಂಡು ಅವು ಆದಾಯ ಉತ್ಪಾದಿಸಬೇಕಾದರೆ ಸ್ವಲ್ಪ ಸಮಯ ಕಾಯಬೇಕಾಗುತ್ತದೆ. (Gestation Period) ಈ ಅವಧಿಯಲ್ಲಿ ಅವರಿಗೆ ಯಾವುದೇ ಆದಾಯದ ಮೂಲಗಳು ಇರದಿದ್ದರಿಂದ ಸ್ವಲ್ಪ ಹಣವನ್ನಾದರೂ ತಮ್ಮ ಖರ್ಚಿಗೆ ಬಳಸಿಕೊಳ್ಳಲು ಇಷ್ಟಪಡುತ್ತಿದ್ದಾರೆ.

**೩.೧.೩ ಯೋಜನೆಯ ಕಾರ್ಯನುಷ್ಠಾನದಲ್ಲಿ ಬ್ಯಾಂಕುಗಳ ಪಾತ್ರ:**

ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯು ಬ್ಯಾಂಕ್ ಸಾಲ ಸಹಿತ ಉದ್ಯೋಗ ಸಾಂದ್ರ ಬಡತನ ನಿವಾರಣ ಕಾರ್ಯಕ್ರಮವಾಗಿದೆ. ಸರಕಾರ ಬ್ಯಾಂಕಿನೊಡಗೂಡಿ ಸಾಲವನ್ನು ಕೊಡುತ್ತದೆ. ಯೋಜನೆಯ ಕಾರ್ಯನುಷ್ಠಾನದಲ್ಲಿಬ್ಯಾಂಕ್ ಅಂತಿಮ ಮತ್ತು ಮಹತ್ವದ ಹಂತದ್ದು. ಈ ಹಂತದಲ್ಲಿ ಫಲಾನುಭವಿಗಳು ಮತ್ತು ಸಾರ್ವಜನಿಕರೊಡನೆ ಒಳ್ಳೆಯ ಸಂಬಂಧವಿಟ್ಟುಕೊಳ್ಳುವುದು ಅವಶ್ಯವಿದೆ. ಆದೇ ರೀತಿಯಲ್ಲಿ ಬ್ಯಾಂಕಿನ ಕ್ಷೇತ್ರಾಧಿಕಾರಿಗಳು (Field Officer) ಫಲಾನುಭವಿಗಳೊಡನೆ ಉತ್ತಮ ಬಾಂಧವ್ಯವಿರಿಸಿಕೊಂಡು ಸಾಲದ ಸದುಪಯೋಗದ ಬಗ್ಗೆ ಮಾರ್ಗದರ್ಶನ ನೀಡಬೇಕಾಗುತ್ತದೆ.

ಇಂತಹ ಸಮಯದಲ್ಲಿ ಜನಸಂಖ್ಯೆಗೆ ಅನುಗುಣವಾಗಿ ಬ್ಯಾಂಕುಗಳು ಇರುವುದು ಅವಶ್ಯಕ. ಜಿಲ್ಲೆಗೆ ಹೋಲಿಸಿದರೆ ಈತಾಲ್ಲೂಕಿನಲ್ಲಿ ಅತಿ ಕಡಿಮೆ ಬ್ಯಾಂಕ್ ಸೌಲಭ್ಯಗಳಿವೆ. ಅದರಲ್ಲಿ ಐದು ವಾಣಿಜ್ಯ ಬ್ಯಾಂಕುಗಳ ಶಾಖೆಗಳು ಮತ್ತು ಏಳು ಗ್ರಾಮೀಣ ಬ್ಯಾಂಕುಗಳಶಾಖೆಗಳಿವೆ. ೧೯೯೧ರ ಜನಗಣತಿ ಪ್ರಕಾರ ಪ್ರತಿ ೧೧,೨೫೨ ಜನಸಂಖ್ಯೆಗೆ ಒಂದು ಬ್ಯಾಂಕ್ ಬರುತ್ತದೆ. (ಜಿಲ್ಲಾಅಂಕಿ-ಅಂಶಗಳ ನೋಟ). ಕರ್ನಾಟಕದಲ್ಲಿ ೧೦,೪೦೦ ಜನರಿಗೆ ಒಂದು ಬ್ಯಾಂಕ್ ಇರುತ್ತದೆ. (Vinod vyasul-೧೯೯೫) ನಮ್ಮ ಅಧ್ಯಯನ ಕ್ಷೇತ್ರವಾದ ಹಗರಿಬೊಮ್ಮನಹಳ್ಳಿ ತಾಲ್ಲೂಕಿಗೂ ಹಾಗು ರಾಜ್ಯಕ್ಕೂ ಈ ರೀತಿಯಾದ ವ್ಯತ್ಯಾಸವಿರುವುದು ಕಂಡು ಬರುತ್ತದೆ.

ಬ್ಯಾಂಕ್ ಅಧಿಕಾರಿಗಳು ಸಾಲ ಕೊಟ್ಟ ಮಾತ್ರಕ್ಕೆ ಅವರ ಕೆಲಸ ಮುಗಿಯುವುದಿಲ್ಲ. ಕೊಟ್ಟಿರುವ ಸಾಲವು ಉಪಯೋಗವಾಗುತ್ತದೆಯೋ ಇಲ್ಲವೊ ಎಂಬುದನ್ನು ಪರೀಕ್ಷಿಸಬೇಕಾಗಿದೆ. ಆದರೆ ಇಂದು ಬ್ಯಾಂಕುಗಳು ಸಾಲ ಕೊಟ್ಟ ನಂತರ ಕೆಲವು ವರ್ಷಗಳ ಬಳಿಕ ಸಾಲ ವಸೂಲಾತಿಗೆ ಬರುತ್ತಾರೆ. ಸಾಮಾನ್ಯವಾಗಿ ಆ ಸಾಲಗಳು ಸರಿಯಾಗಿ ಉಪಯೋಗವಾಗಿರುವುದಿಲ್ಲ. ಇದರಿಂದ ಅವರ ಮರುಪಾವತಿಯ ಸಾಮರ್ಥವು ಕುಸಿಯುತ್ತದೆ. ಮತ್ತು ಅವರ ಜೀವನಮಟ್ಟದಲ್ಲಿಯೂ ಸುಧಾರಣೆಯಾಗುವುದಿಲ್ಲ. ನಮ್ಮ ನಮೂನೆಯಲ್ಲಿರುವ ಫಲಾನುಭವಿಗಳು ಬ್ಯಾಂಕಿನೊಂದಿಗೆ ಯಾವರೀತಿಯಲ್ಲಿ ವ್ಯವಹರಿಸುತ್ತಾರೆ ಎಂಬುದನ್ನು ನಾವು ಕೊಷ್ಟಕ ೩.೪ದಲ್ಲಿ ನೋಡಬಹುದಾಗಿದೆ.

ಕೋಷ್ಟಕ ೩.೪:ಫಲಾನುಭವಿಗಳು ಬ್ಯಾಂಕಿನೊಂದಿಗೆ ವ್ಯವಹರಿಸುವ ರೀತಿ:

| ಸಂ. | ವಿಧಾನ | ಪುರುಷ | ಮಹಿಳೆ | ಒಟ್ಟು |
|---|---|---|---|---|
| ೧ | ಸ್ವಂತಕ್ಕೆ/ ಒಬ್ಬನೆ/ಳೆ | ೩೨(೬೧.೫೩) | ೧೧(೨೧.೧೫) | ೪೩(೮೨.೬೯) |
| ೨ | ಪರಿಚಯಸ್ಥರನ್ನು | ೧ (೧.೯೨) | ೧ (೧.೯೨) | ೨ (೩.೮೪) |
| ೩ | ಮಧ್ಯವರ್ತಿಗಳನ್ನು | -- | -- | -- |
| ೪ | ಕುಟುಂಬದ ಸದಸ್ಯರನ್ನು | -- | ೭(೧೩.೪೦) | ೭(೧೩.೪೬) |
| | | ೩೩ | ೧೯ | ೫೨ |

ಅಧ್ಯಯನದ ನಮೂನೆಯ ಫಲಾನುಭವಿ ಕುಟುಂಬಗಳಲ್ಲಿ ೪೩ ಫಲಾನುಭವಿ ಕುಟುಂಬಗಳೂ (ಶೇ ೮೨.೬೯) ಸ್ವಂತಹ ಹೋಗಿ ಬ್ಯಾಂಕಿನೊಂದಿಗೆ ವ್ಯವಹರಿಸುತ್ತಿದ್ದಾರೆ.ಇಲ್ಲಿ ೩೨(ಶೇ ೬೧.೫೩) ಪುರುಷ ಫಲಾನುಭವಿಗಳು,೧೧(ಶೆ ೨೧.೧೫) ಮಹಿಳಾ ಫಲಾನುಭವಿಗಳು ಸೇರಿರುತ್ತಾರೆ. ಪರಿಚಯಸ್ಥರ ಮೂಲಕ ವ್ಯವಹಾರ ಮಾಡುವವರು ಕೇವಲ ಇಬ್ಬರು ಮಾತ್ರ (ಶೇ೩.೮೪).ಇವರಲ್ಲಿ ಒಬ್ಬ ಪುರುಷ ಮತ್ತು ಒಬ್ಬ

ಮಹಿಳೆ ಫಲಾನುಭವಿಯು ಸೇರಿರುತ್ತಾರೆ.ಮಧ್ಯವರ್ತಿಗಳ ಜೊತೆಯಲ್ಲಿ ಬ್ಯಾಂಕಿಗೆ ಹೋಗುತ್ತಾರೆ. ಇದರಿಂದ ಹಣವು ದುರುಪಯೋಗವಾಗುತ್ತದೆ ಎನ್ನುವ ಕೂಗುಸಹ ಇದೆ. ಆದರೆ ಪ್ರಸ್ತುತದಲ್ಲಿ ಯಾರು ಮಧ್ಯವರ್ತಿಗಳ ಜೊತೆಯಲ್ಲಿ ವ್ಯವಹರಿಸುತ್ತಿಲ್ಲ.

ಕುಟುಂಬದ ಸದಸ್ಯರೊಡನೆ ೭(ಶೇ೧೩.೪೬) ಫಲಾನುಭವಿಗಳು ಬ್ಯಾಂಕಿಗೆ ಹೋಗುತ್ತಿದ್ದಾರೆ. ಇವರಲ್ಲಿ ಎಲ್ಲರೂಮಹಿಳೆಯರೇ ಇದ್ದಾರೆ. ಅಂದರೆ ಮಹಿಳೆಯರಿಗೆ ಬ್ಯಾಂಕಿನೊಂದಿಗೆ ವ್ಯವಹರಿಸುವ ಜ್ಞಾನವಿಲ್ಲ ಅಥವ ಅವರಗೆ ತಿಳುವಳಿಕೆ ಇಲ್ಲ ಎಂದು ತಿಳಿಯುತ್ತದೆ.

ಯೋಜನೆಯು ಉತ್ತಮ ರೀತಿಯಲ್ಲಿ ಯಶಸ್ವಿಯಾಗಬೇಕಾದರೆ ಸರಕಾರ ಹಾಗು ಫಲಾನುಭವಿಗಳ ನಡುವೆ ಬ್ಯಾಂಕುಗಳುಕೊಂಡಿಯಂತೆ ಕೆಲಸ ಮಾಡಬೇಕಾಗಿದೆ. ಸಾಲಕೊಡುವುದನ್ನು ವಿಳಂಬ ಮಾಡದೆ, ಅನಗತ್ಯ ಕಿರುಕುಳ ಕೊಡದೆ ಫಲಾನುಭವಿಗಳೊಡನೆ ಹಾಗೂ ಸಾರ್ವಜನಿಕರೊಡನೆ ಸಹಕರಿಸಿದಲ್ಲಿ ಅನುಕೂಲವಾಗುಲು ಸಾಧ್ಯವಿದೆ.

ಭಾಗ -೨

### ೩.೨.೧ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯ ಪರಿಣಾಮಗಳು

ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯು ಯಾವ ಮಟ್ಟದಲ್ಲಿ ಯಶಸ್ವಿಯಾಗಿದೆ ಎಂದು ತಿಳಿಯಲು ಹಲವಾರುಅಂಶಗಳನ್ನು ಆಧಾರವಾಗಿಟ್ಟುಕೊಂಡು ವಿವಿಧ ಅಧ್ಯಯನಗಳು ನಡೆದಿವೆ. ಪ್ರಸ್ತುತದ ಅಧ್ಯಯನದಲ್ಲಿ ಆದಾಯ ಮತ್ತು ಸಾಲದ ಮರುಪಾವತಿಯ ಸ್ವರೂಪ ಎಂಬ ಎರಡು ಚಲಕಗಳಿಂದ ವಿವರಿಸಲು ಪ್ರಯತ್ನಿಸಲಾಗಿದೆ. ಯೋಜನಾ ಪೂರ್ವ ಹಾಗೂ ಯೋಜನೆಯ ನಂತರ ಯಾವ ಯಾವ ಆದಾಯದ ಗುಂಪುಗಳಲ್ಲಿ ಕುಟುಂಬಗಳು ಇವೆ ಎಂಬುದನ್ನು ಗುರುತಿಸಲಾಗಿದೆ. ಇದರಿಂದ ಫಲಾನುಭವಿ ಕುಟುಂಬಗಳು ಆದಾಯವನ್ನು ಯೋಜನೆಯ ಆಸ್ತಿಗಳಿಂದ ಸೃಜಿಸುತ್ತಿಕೊಳ್ಳುತ್ತಿವೆಯೋ ಇಲ್ಲವೋ , ಸಾಲ ಹಣ ಮಾತ್ರ ಆದಾಯವಾಗಿದೆಯೋ ಎಂಬುದನ್ನು ಕಂಡುಕೊಳ್ಳಲು ಪ್ರಯತ್ನಿಲಾಗಿದೆ. ಸಾಲದ ಮರುಪಾವತಿಯನ್ನು ಯೋಜನೆಯು ಯಾವ ಗತಿಯಲ್ಲಿ ಯಶಸ್ವಿಯಾಗಿದೆ ಎಂಬುದನ್ನು ವಿವರಿಸಲು ಬಳಸಿಕೊಳ್ಳಲಾಗಿದೆ. ಸಾಲ ಮರುಪಾವತಿ ಮಾಡಿದವರು ಯೋಜನೆಯನ್ನು ಚೆನ್ನಾಗಿಯೇ ಬಳಸಿಕೊಂಡಿದ್ದಾರೆ. ಆದರೆ ಯೋಜನೆಯಿಂದ ಉಪಯೋಗ ಪಡೆದುಕೊಂಡವರೆಲ್ಲರೂ ಸಾಲದ ಮರುಪಾವತಿ ಮಾಡಿಲ್ಲ .ಇದಕ್ಕೆಲ್ಲ ಬೇರೆ ಬೇರೆ ಕಾರಣಗಳಿವೆ.

ಯೋಜನೆಯ ವೈಫಲ್ಯಕ್ಕೆ ಸಾಮಾನ್ಯವಾಗಿ ಬಹು ವಿಧ ಕಾರಣಗಳು ಇರುತ್ತವೆ. ಆದರೆ ಅವೆಲ್ಲವನ್ನು ಇಲ್ಲಿ ವಿವರಿಸಿಲ್ಲ.ಶಿಕ್ಷಣ ಯೋಜನೆಯ ಯಶಸ್ಸಿಗೆ ಯಾವ ರೀತಿ ಕಾರಣವಾಗಿದೆ? ಶಿಕ್ಷಣ ಇಲ್ಲದ ಅನಕ್ಷರಸ್ಥಸರು ಎಷ್ಟರ ಮಟ್ಟಿಗೆ ಇದನ್ನು ಉಪಯೋಗಿಸಿಕೊಂಡಿದ್ದಾರೆ ? ವೈಫಲ್ಯಕ್ಕೆ ಸಾಲದ ಮೊತ್ತದ ಹಣ ಯಾವ ರೀತಿ ಕಾರಣವಾಗಿದೆ ? ಮಾರುಕಟ್ಟೆ ಹಾಗೂ ಇತರ ಸೌಕರ್ಯಗಳು ಯಾವ ರೀತಿಯಲ್ಲಿ ಕಾರಣವಾಗಿದೆ ? ಮುಂತಾದ ಅಂಶಗಳನ್ನು ಇಲ್ಲಿ ವಿವರಿಸಲು ಪ್ರಯತ್ನಿಸಲಾಗಿದೆ.

### ೩.೨.೨ ಸಮಗ್ರ ಗ್ರಾಮೀಣ ಅಭಿವೃದ್ಧಿಯೋಜನೆಯಿಂದ ಫಲಾನುಭವಿಗಳ ವರಮಾನದ ಮೇಲೆ ಉಂಟಾದ ಪರಿಣಾಮ :

ಸಮಗ್ರ ಗ್ರಾಮೀಣಾಭಿವೃದ್ಧಿ ಯೋಜನೆಯಲ್ಲಿ ನೆರವು ಪಡೆದ ಫಲಾನುಭವಿಗಳ ವರಮಾನದ ಮಟ್ಟ ಉತ್ತಮಗೊಂಡಿರುವುದು ನಮ್ಮ ಅಧ್ಯಯನದಿಂದ ತಿಳಿದು ಬರುತ್ತವೆ. ಆದರೆ ಯೋಜನೆಯಿಂದ ಹರಿದು ಬಂದ ವರಮಾನವು ಎಲ್ಲಾ ಫಲಾನುಭವಿಗಳನ್ನು ಬಡತನದ ರೇಖೆಯಿಂದ ಪೂರ್ಣವಾಗಿ ಮೇಲೆತ್ತುವುದರಲ್ಲಿ ಯಶಸ್ವಿಯಾಗಿಲ್ಲ. ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯು ಬಡತನ ರೇಖೆಯ ಕೆಳಗಿರುವ

ಕುಟುಂಬಗಳಿಗೆ ಒಂದು ರೀತಿಯ ಪರಿಹಾರವನ್ನು ಒದಗಿಸುತ್ತಿದೆಯೇ ವಿನಾ ಅದು ಸ್ವಯಂ ಪೋಷಿತ ವರಮಾನವನ್ನು ನೀಡಲು ಸಾಧ್ಯವಾಗಿಲ್ಲ ಎಂಬುದು ನಮ್ಮ ಅಧ್ಯಯನದಲ್ಲಿ ಧೃಡಪಟ್ಟಿದೆ. ಅಂದ ಮೇಲೆ ಈ ಯೋಜನೆಯು ಮೂಲ ಉದ್ದೇಶವಾದ ಬಡತನದ ರೇಖೆಯಿಂದ ಮೇಲೆತ್ತುವುದು ಅಪೂರ್ಣವಾಗಿ ಉಳಿದಿದೆ.

ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯ ಫಲಾನುಭವಿಗಳ ವರಮಾನದ ಮೇಲೆ ಉಂಟುಮಾಡಿರುವ ಪರಿಣಾಮವನ್ನು ನಮ್ಮ ಅಧ್ಯಯನದ ನಮೂನೆಯಲ್ಲಿನ ೫೨ ಕುಟುಂಬಗಳ ಯೋಜನಾ ಪೂರ್ವ ಹಾಗೂ ಯೋಜನಾ ನಂತರದ ವರಮಾನದಪ್ರಮಾಣವನ್ನು ತುಲನೆ ಮಾಡುವುದರ ಮೂಲಕ ಅರಿತು ಕೊಳ್ಳಲು ಪ್ರಯತ್ನಿಲಾಗಿದೆ. ಕೋಷ್ಟಕ ೩.೫ ಮತ್ತು ೩.೬ರಲ್ಲಿ ಫಲಾನುಭವಿಗಳ ಯೋಜನಾ ಪೂರ್ವ ಹಾಗೂ ಯೋಜನಾ ನಂತರದ ವರಮಾನದ ಪ್ರಮಾಣವನ್ನು ತೋರಿಸಿದೆ.

ಈ ಮೊದಲೆ ತಿಳಿಸಿರುವಂತೆ ನಮ್ಮ ಅಧ್ಯಯನಕ್ಕೆ ಆಯ್ದು ಕೊಂಡಿರುವ ೫೨ ಫಲಾನುಭವಿಗಳಲ್ಲಿ ೩೧ ಕುಟುಂಬಗಳು ಪ್ರಾಥಮಿಕ ವಲಯದಲ್ಲೂ ೦೨ ಕುಟುಂಬಗಳು ದ್ವಿತೀಯ ವಲಯದಲ್ಲೂ ಮತ್ತು ೧೯ ಕುಟುಂಬಗಳು ತೃತೀಯ ವಲಯದಲ್ಲೂ ಇದ್ದಾರೆ. ಪ್ರತಿಯೊಂದು ವಲಯದ ವಿವಿಧ ಫಲಾನುಭವಿಗಳನ್ನು ವಿಭಜಿಸಲಾಗಿದೆ.

ಕೋಷ್ಟ್ಕ: ೩.೫ಫಲಾನುಭವಿಗಳ ಯೇಜನಾ ಪೂರ್ವ ಕುಟುಂಬದ ಆದಾಯ

| | ಬಡತನ ರೇಖೆಯ ಕೆಳಗಿರುವ ಕುಟುಂಬಗಳು | | | ಬಡತನ ರೇಖೆಯ ಮೇಲೆರುವ ಕುಟುಂಬಗಳು | | |
|---|---|---|---|---|---|---|
| | ೩೦೦೦ ದವರೆಗೆ | ೩೦೦೧-೬೦೦೦ | ೬೦೦೧-೯೦೦೦ | ೯೦೦೧-೧೨೦೦ | ೧೨೦೦೧ಕ್ಕೂ ಮೇಲ್ಪಟ್ಟು | ಒಟ್ಟು |
| ಪ್ರಾಥಮಿಕ ವಲಯ | ಪು೭(೧೩.೪೬)<br>ಮ೬(೧೧.೫೩)<br>ಒ ೧೩(೨೫) | ಪು೭(೧೩.೪೬)<br>ಮ ೫(೯.೬೧)<br>ಒ೧೨(೨೩.೦೭) | ಪು೩(೫.೭೬)<br>ಮ೩(೫.೭೬)<br>ಒ೬(೧೧.೫೩) | -<br>-<br>- | -<br>-<br>- | ಪು೧೭ (೩೨.೬೯)<br>ಮ ೧೪ (೨೬.೯೨)<br>ಒ ೩೧ (೫೯.೬೧) |
| ದ್ವಿತೀಯ ವಲಯ | ಪು೬(೧.೯೨)<br>ಮ ೦<br>ಒ ೧(೧.೯೨) | ಪು ೦<br>ಮ೧(೧.೯೨)<br>ಒ ೧(೧.೯೨) | -<br>-<br>- | -<br>-<br>- | -<br>-<br>- | ಪು ೧(೧.೯೨)<br>ಮ ೧(೧.೯೨)<br>ಒ ೧(೩.೮೪) |
| ತೃತೀಯ ವಲಯ | ಪು ೪(೨.೬೯)<br>ಮ ೧(೧.೯೨)<br>ಒ ೫(೯.೬೧) | ಪು ೭(೧೩.೪೧)<br>ಮ ೨(೩.೮೪)<br>ಒ ೯(೧೭.೩೦) | ಪು೪(೭.೬೯)<br>ಮ(೧ (೧.೯೨)<br>ಒ(೫(೯.೬೧) | -<br>-<br>- | -<br>-<br>- | ಪು ೧೫(೨೮.೮೪)<br>ಮ ೧೫(೭.೬೯)<br>ಒ ೧೯(೩೬.೫೩) |
| ಒಟ್ಟು ಪುರುಷರು | ಪು೧೨(೨೩.೦೭) | ಪು೧೪(೨೬.೯೨) | ಪು೭(೧೩.೪೬) | - | - | ಪು ೩೩(೬೩.೪೬) |
| ಒಟ್ಟು ಮಹಿಳೆಯರು | ಮ೭(೧೩.೫೩) | ಮ ೮(೧೫.೩೬) | ಮ೪(೭.೬೪) | - | - | ಮ೧೯(೩೬.೫೩) |
| ಒಟ್ಟು | ೧೯(೩೬.೫೩) | ೨೨(೪೨.೩೦) | ೧(೨೧.೧೫) | - | - | ಒಟ್ಟು ೫೨ (೧೦೦.) |

**೩.೨.೩ ಯೋಜನಾ ಪೂರ್ವ ವರಮಾನದ ಮಟ್ಟ**

ಯೋಜನೆಯ ಪೂರ್ವದಲ್ಲಿ ನಮೂನೆಯಲ್ಲಿನ ೫೨ ಕುಟುಂಬಗಳಲ್ಲಿ ೩೧ ಕುಟುಂಬಗಳು (ಶೇ.೫೯.೬೧ ) ಪ್ರಾಥಮಿಕ ವಲಯದಲ್ಲಿದ್ದಾರೆ. ಇವರಲ್ಲಿ ಪುರುಷರ ೧೭ (ಶೇ.೩೨.೬೯)ಕುಟುಂಬಗಳು ಮತ್ತು ೧೪ (ಶೇ.೨೬.೯೨) ಮಹಿಳಾ ಕುಟುಂಬಗಳಿವೆ. ಕೋಷ್ಟಕ ೩.೫ರಲ್ಲಿ ತೋರಿಸಿರುವಂತೆ ಯೋಜನಾ ಪೂರ್ವ ಹಂತದಲ್ಲಿ ಒಟ್ಟು ಫಲಾನುಭವಿಗಳಲ್ಲಿ ಶೇ.೨೫ರಷ್ಟು. ಅಂದರೆ ೧೩ ಕುಟುಂಬಗಳು ೩೦೦೦ ರೂಪಾಯಿವರೆಗಿನ ವರಮಾನದ ಗುಂಪಿನಲ್ಲಿದ್ದರು . ಈ ೩೦೦೦ ರೂಪಾಯಿ ವರಮಾನದ ಗುಂಪಿನಲ್ಲಿದ್ದ ೧೩ ಫಲಾನುಭವಿ ಕುಟುಂಬಗಳಲ್ಲಿ ೭ (ಶೇ.೧೩.೪೬) ಪುರುಷರು ಮತ್ತು ೬ (ಶೇ.೧೧.೫೩ ) ಮಹಿಳೆಯರು ಇದ್ದಾರೆ. ಈ ಗುಂಪನ್ನು ನಾವು ಅತಿ ಬಡವರುಎಂದು ವರ್ಗೀಕರಿಸಬಹುದು . ಈ ಗುಂಪಿನಲ್ಲಿ ಪುರುಷರ ಮತ್ತು ಮಹಿಳೆಯರ ಪ್ರಮಾಣದಲ್ಲಿ ತೀವ್ರ ಅಂತರವೇನಿಲ್ಲ.

ಎರಡನೆಯ ವರಮಾನದ ಗುಂಪೆಂದರೆ ೩೦೦೧ ರಿಂದ ೬೦೦೦ ರೂಪಾಯಿ ವರಮಾನದ ಗುಂಪು . ಈ ಗುಂಪಿನಲ್ಲಿ ಯೋಜನೆಯ ಪೂರ್ವದಲ್ಲಿದ್ದ ಫಲಾನುಭವಿಗಳ ಸಂಖ್ಯೆ ೧೨ (ಶೇ.೨೩.೦೭) . ಇವರಲ್ಲಿ ಮಹಿಳೆಯರು ೫ (ಶೇ.೯.೬೧ ) ಮತ್ತು ಪುರುಷರ ಸಂಖ್ಯೆ ೭ (ಶೇ.೧೩.೪೬)

ಯೋಜನಾ ಪೂರ್ವ ಕಾಲಘಟ್ಟದಲ್ಲಿ ವರಮಾನದ ಶ್ರೇಣಿಯು ಅಧಿಕಗೊಂಡಂತೆ ಫಲಾನುಭವಿಗಳ ಸಂಖ್ಯೆ ಕಡಿಮೆಯಾಗುತ್ತಿದೆ. ಇಲ್ಲಿ ೬೦೦೧ ರಿಂದ ೯೦೦೦ ರೂಪಾಯಿ ವರಮಾನದ ಗುಂಪಿನಲ್ಲಿದ್ದವರ ಸಂಖ್ಯೆ ಕೇವಲ ೬ (ಶೇ.೧೧.೫೩ ) ಕೊನೆಯ ೯೦೦೧ ರಿಂದ ೧೨,೦೦೦ ರೂಪಾಯಿ ಹಾಗೂ ೧೨,೦೦೧ ಮತ್ತು ಹೆಚ್ಚಿಗೆ ವರಮಾನದ ಗುಂಪುಗಳಲ್ಲಿ ಯಾವುದೇ ಫಲಾನುಭವಿ ಕುಟುಂಬಗಳಿಲ್ಲ.

ದ್ವಿತೀಯ ವಲಯದಲ್ಲಿದ್ದ ಫಲಾನುಭವಿ ಕುಟುಂಬಗಳು ಬಡತನದ ರೇಖೆ ಕೆಳಗೆ ಇದ್ದಾವೆ. ಒಂದು ಕುಟುಂಬ ಮೊದಲನೆಯ ವರಮಾನದ ಗುಂಪಿನಲ್ಲಿದ್ದರೆ , ಎರಡನೆಯ ಕುಟುಂಬ ಎರಡನೆಯ ವರಮಾನದ ಗುಂಪಿನಲ್ಲಿದೆ

ಇದೇ ತಾಲೂಕಿನಲ್ಲಿ ದ್ವಿತೀಯ ವಲಯದಲ್ಲಿರುವ ಶ್ರಮ ಶಕ್ತಿಯ ಪ್ರಮಾಣ ಕಡಿಮೆ ಇರುವುದರಿಂದ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯಡಿಯಲ್ಲಿನ ಫಲಾನುಭವಿ ಕುಟುಂಬಗಳ ಪ್ರಮಾಣವೂ ಕಡಿಮೆ

ತೃತೀಯ ವಲಯದಲ್ಲಿ ನಮ್ಮ ನಮೂನೆಯಲ್ಲಿ ೧೯ ಫಲಾನುಭವಿ ಕುಟುಂಬಗಳಿವೆ. ಈ ವಲಯದಲ್ಲಿ ೫ ಕುಟುಂಬಗಳುಮೊದಲ ಆದಾಯದ ಗುಂಪಿನಲ್ಲಿ ೯ ಕುಟುಂಬಗಳು ಎರಡನೇ ಆದಾಯದ ಗುಂಪಿನಲ್ಲಿ ೫ ಕುಟುಂಬಗಳ ಮೂರನೇ ಆದಾಯದ ಗುಂಪಿನಲ್ಲಿ ಇವೆ.

ಕೋಷ್ಟಕ: ೩.೫ಫಲಾನುಭವಿಗಳ ಯೋಜನಾ ನಂತರ ಕುಟುಂಬದ ಆದಾಯ

| | ಬಡತನ ರೇಖೆಯ ಕೆಳಗಿರುವ ಫಲಾನುಭವಿಗಳು | | | ಬಡತನ ರೇಖೆಯ ಮೇಲಿರುವ ಫಲಾನುಭವಿಗಳು | | |
|---|---|---|---|---|---|---|
| | ೩೦೦೦ರೂ ವರೆಗೆ | ೩೦೦೧ -೬೦೦೦ | ೬೦೦೧- ೯೦೦೦ | ೯೦೦೧ -೧೨೦೦೦ | ೧೨೦೦೦ಕ್ಕೆ ಹೆಚ್ಚು | ಒಟ್ಟು |
| ಪ್ರಾಥಮಿಕ ವಲಯ | ಪು೪(೭.೬೯)<br>ಮ೩(೫.೭೬)<br>ಒ೭(೧೩.೪೬) | ಪು೬(೧೧.೫೩)<br>ಮ೪(೭.೬೯)<br>ಒ೧೦(೧೯.೨೩) | ಪು೪(೭.೬೯)<br>ಮ೬(೧೧.೫೩)<br>ಒ೧೦(೧೯.೨೩) | ಪು೨(೩.೮೪)<br>ಮ೧(೧.೯೨)<br>ಒ೩(೫.೭೬) | ಪು೧(೧.೯೨)<br>ಮ೦<br>ಒ೧(೧.೯೨) | ಪು೧೭(೩೨.೬೯)<br>ಮ೧೪(೨೬.೯೨)<br>ಒ೩೧(೫೯.೬೧) |
| ದ್ವಿತೀಯ ವಲಯ | ಪು --<br>ಮ--<br>ಒ -- | ಪು೧(೧.೯೨)<br>ಮ --<br>ಒ೧(೧.೯೨) | ಪು--<br>ಮ ---<br>ಒ -- | ಪು೦<br>ಮ೧(೧.೯೨)<br>ಒ೧(೧.೯೨) | --<br>--<br>-- | ಪು೧(೧.೯೨)<br>ಮ೧(೧.೯೨)<br>ಒ೨(೩.೮೪) |
| ತೃತೀಯ ವಲಯ | ಪು೧(೧.೯೨)<br>ಮ --<br>ಒ೧(೧.೯೨) | ಪು೪(೭.೬೯)<br>ಮ೧(೧.೯೨)<br>ಒ೫(೯.೬೧) | ಪು೬(೧೧.೫೩)<br>ಮ೧(೧.೯೨)<br>ಒ೭(೧೩.೪೬) | ಪು೨(೩.೮೪)<br>ಮ೧(೧.೯೨)<br>ಒ೩(೫.೭೬) | ಪು೨(೩.೮೪)<br>ಮ೧(೧.೯೨)<br>ಒ೩(೫.೨೬) | ಪು೧೫(೨೮.೮೪)<br>ಮ೪(೭.೬೯)<br>ಒ೧೯(೩೬.೫೫) |
| ಒಟ್ಟು ಪುರುಷರು | ಪು೫(೯.೬೧) | ಪು೧೧(೨೧.೧೫) | ಪು೧೦(೧೯.೭೩) | ಪು೪(೭.೬೯) | ಪು೩(೩.೮೪) | ಪು೩೩(೬೩.೪೬) |
| ಒಟ್ಟು ಮಹಿಳೆಯರು | ಮ೩(೫.೭೬) | ಮ೧೧(೨೧.೧೫) | ಮ೭(೧೩.೪೬) | ಮ೩(೫.೭೬) | ಮ೧(೧.೯೨) | ಮ೧೯(೩೬.೫೩) |
| ಒಟ್ಟು | ೮(೧೫೩೮) | ೧೬(೩೦.೭೬) | ೧೭(೩೨.೬೯) | ೭(೧೩.೪೬) | ೪(೨.೬೯) | ೫೨ |

**೩.೨.೪ ಯೋಜನಾ ನಂತರದ ವರಮಾನದ ಮಟ್ಟ**

ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯಡಿಯಲ್ಲಿ ಕೈಗೊಂಡ ಚಟುವಟಿಕೆಗಳಿಂದ ಉಂಟಾದ ವರಮಾನದ ಮೇಲಿನ ಪರಿಣಾಮವನ್ನು ಗುರುತಿಸಲು ನಾವು ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯ ಫಲಾನುಭವಿ ಕುಟುಂಬಗಳ ಯೋಜನಾ ಪೂರ್ವ ವರಮಾನದ ಮಟ್ಟವನ್ನು ಯೋಜನಾ ನಂತರದ ವರಮಾನದ ಮಟ್ಟದ ನಡುವೆ ತುಲನೆ ಮಾಡಬೇಕಾಗುತ್ತದೆ.

ಪ್ರಾಥಮಿಕ ವಲಯದಲ್ಲಿ ಯೋಜನಾ ಪೂರ್ವದಲ್ಲಿ ಮೊದಲ ವರಮಾನದ ಗುಂಪಿನಲ್ಲಿದ್ದವರ ಪ್ರಮಾಣ ಶೇ. ೨೫ ರಿಂದಯೋಜನಾಂತರ ಶೇ.೧೩.೪೬ಕ್ಕೆ ಇಳಿದಿದೆ. ಅಂದರೆ ಉಳಿದ ಫಲಾನುಭವಿಗಳು ವರಮಾನದ ಮುಂದಿನ ಗುಂಪಿಗೆ ಸಾಗಿರಬಹುದೆಂದು ಹೇಳಬಹುದು. ಆದರೆ ಮೊದಲ ವರಮಾನದ ಗುಂಪಿನಿಂದ ಮುಂದೆ ಜಿಗಿದ ಕುಟುಂಬಗಳು ಬಡತನದ ರೇಖೆಯನ್ನು ದಾಟಿವೆಯೆಂದು ಹೇಳಲು ಸಾಧ್ಯವಿಲ್ಲ .ಎರಡನೇ ವರಮಾನದ ಗುಂಪಿನಲ್ಲಿರುವವರ ಕುಟುಂಬಗಳು ೧೨ (ಶೇ.೨೩.೦೭) ರಿಂದ ೧೦ಕ್ಕೆ (ಶೇ.೧೯.೨೩) ಇಳಿದಿವೆ. ಮೂರನೇ

ವರಮ್ಹಾನದ ಗುಂಪಿನಲ್ಲಿರುವ ಕುಟುಂಬಗಳ ಸಂಖ್ಯೆ ೬ (ಶೇ.೧೧.೫೩) ರಿಂದ ೧೦ಕ್ಕೆ (ಶೇ.೧೯.೨೩ ) ಹೆಚ್ಚಿದೆ.ಅಂದರೆ ಯೋಜನೆಯ ನಂತರ ಕಡಿಮೆ ಆದಾಯದ ಗುಂಪಿನಲ್ಲಿನ ಫಲಾನುಭವಿಗಳು ಹೆಚ್ಚಿನ ವರಮಾನದ ಗುಂಪಿನ ಕಡೆಗೆ ಸಾಗಿವೆ. ನಾಲ್ಕನೆ ವರಮ್ಹಾನದಗುಂಪಿನಲ್ಲಿ ಯೋಜನ ಪೂರ್ವದ ಯಾವುದೇ ಕುಟುಂಬವಿರಲಿಲ್ಲ. ಯೋಜನಾ ನಂತರ ೩ (ಶೇ.೫.೭೬) ಕುಟುಂಬಗಳು ಈ ಗುಂಪಿಗೆ ಬಂದಿವೆ. ಕೊನೆಯ ವರಮಾನದ ಗುಂಪಿನಲ್ಲಿ ಒಂದೇ (ಶೇ.೧.೯೨ ) ಕುಟುಂಬವಿದೆ. ಪ್ರಾಥಮಿಕ ವಲಯದಲ್ಲಿ ಒಟ್ಟು ನಾಲ್ಕು ಕುಟುಂಬಗಳು ಮಾತ್ರ ಬಡತನ ರೇಖೆಯಿಂದ ಮೇಲೆ ಬಂದಿವೆ.

ದ್ವಿತೀಯ ವಲಯದಲ್ಲಿರುವ ಕುಟುಂಬಗಳ ಸಂಖ್ಯೆ ಕೇವಲ ೨ (ಶೇ.೩.೮೪). ಯೋಜನಾ ಪೂರ್ವದಲ್ಲಿ ಎರಡು ಕುಟುಂಬಗಳೂ ಬಡತನ ರೇಖೆಯ ಕೆಳಗಡೆ ಇದ್ದಾವೆ. ಒಂದು ಕುಟುಂಬ ಮೊದಲಿನ ವರಮಾನದ ಗುಂಪಿನಲ್ಲಿದ್ದರೆ ಎರಡನೇ ಕುಟುಂಬ ಎರಡನೇ ವರಮಾನದ ಗುಂಪಿನಲ್ಲಿದೆ. ಯೋಜನೆಯ ನಂತರ ಒಂದು ಕುಟುಂಬ ಒಂದನೇ ವರಮಾನದ ಗುಂಪಿನಿಂದ ಎರಡನೇ ವರಮಾನದ ಗುಂಪಿಗೆ ಬಂದಿದೆ. ಯೋಜನಾ ಪೂರ್ವದಲ್ಲಿದ್ದ ಎರಡನೇ ಕುಟುಂಬ ಒಳ್ಳೆ ರೀತಿಯಲ್ಲಿ ಸಾಲವನ್ನು ಉಪಯೋಗಿಸಿಕೊಂಡು ಬಡತನ ರೇಖೆಯ ಮೇಲೆ ಅಂದರೆ ವರಮಾನದ ನಾಲ್ಕನೇ ಹಂತವನ್ನು ತಲುಪಿದೆ.

ತೃತೀಯ ವಲಯದಲ್ಲಿ ಒಟ್ಟು ೧೯ (ಶೇ.೩೬.೫೩) ಕುಟುಂಬಗಳಿವೆ. ಮೊದಲನೆ ವರಮಾನದ ಗುಂಪಿನಲ್ಲಿ ಯೋಜನಾ ಪೂರ್ವ ೫ ಕುಟುಂಬಗಳಿದ್ದು ಯೋಜನಾ ನಂತರ ಕೇವಲ ೧ ಕುಟುಂಬವಿದೆ. ಅಂದರೆ ನಾಲ್ಕು ಕುಟುಂಬಗಳು (ಶೇ.೭.೬೯) ಮುಂದಿನ ಆದಾಯದ ಗುಂಪಿಗೆ ಜಿಗಿದಿವೆ.ಎರಡನೇ ಆದಾಯದ ಗುಂಪಿನಲ್ಲಿ ಯೋಜನಾ ಪೂರ್ವ ೯(ಶೇ.೧೭.೩೦) ಕುಟುಂಬಗಳು ಇವೆ. ಯೋಜನೆಯ ನಂತರ ಈ ಗುಂಪಿನಲ್ಲಿ ೫ (ಶೇ.೯.೬೧) ಕುಟುಂಬಗಳು ಈ ವರಮಾನದ ಮಿತಿಯೊಳಗೆ ಇದ್ದು ಮಿಕ್ಕ ನಾಲ್ಕು ಕುಟುಂಬಗಳು ಮುಂದಿನ ವರಮಾನದ ಗುಂಪಿನಲ್ಲಿ ಹೋಗಿವೆ. .ಮೂರನೆಯ ವರಮಾನದ ಗುಂಪಿನಲ್ಲಿ ಯೋಜನಾ ಪೂರ್ವ ೫ (ಶೆ.೯.೬೧) ಕುಟುಂಬಗಳು ಇವೆ. ಯೋಜನೆಯನಂತರ ಈ ಗುಂಪಿನಲ್ಲಿ ೫(ಶೇ.೯.೬೧)ಕುಟುಂಬಗಳು ಈ ವರಮಾನದ ಮಿತಿಯೊಳಗೆ ಇದ್ದು ಮಿಕ್ಕ ನಾಲ್ಕುಕುಟುಂಬಗಳು ಮುಂದಿನ ವರಮಾನದ ಗುಂಪಿನಲ್ಲಿ ಹೋಗಿವೆ. ಮೂರನೆಯ ವರಮಾನದ ಗುಂಪಿನಲ್ಲಿ ಯೋಜನಾಪೂರ್ವ ೫(ಶೇ.೯.೬೧)ಕುಟುಂಬಗಳು ಇವೆ. ಆದರೆ ಯೋಜನೆಯ ನಂತರ ಈ ಗುಂಪಿಗೆ ಎರಡು ಕುಟುಂಬಗಳು ಸೇರಿವೆ. ಏಕೆಂದರೆ ಹಿಂದಿನ ಆದಾಯದ ಗುಂಪಿನಲ್ಲಿರುವ ಕುಟುಂಬಗಳು ಈ ಗುಂಪಿಗೆ ಬಂದು ಸೇರಿದೆ.

ಯೋಜನಾ ಪೂರ್ವ ತೃತೀಯ ವಲಯದಲ್ಲಿ ನಾಲ್ಕು ಮತ್ತು ಐದನೇ ವರಮಾನದ ಗುಂಪಿನಲ್ಲಿ ಯಾವುದೇ ಕುಟುಂಬ ವಿರಲಿಲ್ಲ. ಆದರೆ ಯೋಜನೆಯ ನಂತರ ಆರು ಕುಟುಂಬಗಳು (ಶೇ೧೧.೫೩) ಬಂದಿರುವುದನ್ನು ಕಾಣುತ್ತಿದ್ದೇವೆ. ಈ ಗುಂಪಿನಲ್ಲಿ ಬರುವವರನ್ನು ಬಡತನ ರೇಖೆಯ ಮೇಲೆ ಬರುವ ಕುಟುಂಬಗಳು ಎಂದು ಕರೆಯಲಾಗಿದೆ. ನಾಲ್ಕನೇವರಮಾನದ ಗುಂಪಿನಲ್ಲಿ ಮೂರು (ಶೇ೫.೭೬)ಕುಟುಂಬಗಳು ಇವೆ. ಮತ್ತು ಕೊನೆಯ ಹಾಗೂ ಐದನೇ ವರಮಾನದಗುಂಪಿನಲ್ಲಿ ಮೂರು (ಶೇ೫.೨೬) ಫಲಾನುಭವಿ ಕುಟುಂಬಗಳಿವೆ. ಈ ಗುಂಪಿನಲ್ಲಿ ಬರುವವರನ್ನು ನಾವು ಬಡತನ ರೇಖೆಯ ಮೇಲೆ ಬರುವ ಕುಟುಂಬಗಳು ಎಂದು ಕರೆಯುತ್ತೇವೆ.

ತೃತೀಯ ವಲಯದಲ್ಲಿ ಕಡಿಮೆ ಆದಾಯದ ಗುಂಪಿನಿಂದ ಹೆಚ್ಚಿನ ಆದಾಯದ ಗುಂಪಿಗೆ ಹೋಗುವವರಲ್ಲಿ ಪುರಷರಿಗಿಂತಸ್ತ್ರೀಯರ ಪ್ರಮಾಣವೇ ಅಧಿಕ. ತೃತೀಯ ವಲಯದಲ್ಲಿರುವ ಒಟ್ಟು ಪುರುಷರು ೧೫(ಶೇ೨೮.೮೪).ಇವರಲ್ಲಿ ನಾಲ್ಕು(ಶೇ೭.೬೯) ಪುರುಷರು ಬಡತನ ರೇಖೆಯ ಮೇಲೆ ಬಂದಿದ್ದಾರೆ. ಇದೇ ವಲಯದಲ್ಲಿರುವ ಮಹಿಳೆಯರ ಸಂಖ್ಯೆ ನಾಲ್ಕು (ಶೇ ೭.೬೯). ಇದರಲ್ಲಿ ೨(ಶೇ೩.೮೪) ಫಲಾನುಭವಿ ಕುಟುಂಬಗಳು ಬಡತನರೇಖೆಯ ಮೇಲೆ ಬಂದಿರುವುದು ಕಂಡು ಬರುತ್ತದೆ. ಇದರಿಂದ ತೃತೀಯ ವಲಯದಲ್ಲಿ ಮಹಿಳಾ ಫಲಾನುಭವಿಗಳಿಗೆಹೆಚ್ಚು ಯೋಜನೆಯಿಂದ ಪ್ರಯೋಜನವಾಗಿದೆ.

**೩.೨.೫.ಬಡತನ ರೇಖೆಯಲ್ಲಿ ಕೆಳಗಿರುವ ಮತ್ತು ಮೇಲಿರುವ ಕುಟುಂಬಗಳು**

ಕೋಷ್ಟಕ-೩.೫ ಮತ್ತು ೩.೬ ವಿವಿಧ ಫಲಾನುಭವಿಗಳು ಯಾವ ಯಾವ ವರಮಾನ ಗುಂಪುಗಳಲ್ಲಿವೆ ಎಂಬುದನ್ನು ತೋರಿಸಿದೆ. ಯೋಜನಾ ಪೂರ್ವದಲ್ಲಿ ಬಡತನದ ರೇಖೆಯ ಕೆಳಗಿರುವ ಒಟ್ಟು ಫಲಾನುಭವಿಗಳ ಸಂಖ್ಯೆ(ವರಮಾನ ೩೦೦೦ ದಿಂದ ಅಧಿಕ ಮತ್ತು ೬೦೦೦ ದವರೆಗೆ) ೪೧. ಆದರೆ ಯೋಜನಾನಂತರ ಈ ವರಮಾನದ ಗುಂಪುಗಳಲ್ಲಿ ಅಂದರೆ ಬಡತನದ ರೇಖೆ ಕೆಳಗಿರುವ ಫಲಾನುಭವಿಗಳ ಸಂಖ್ಯೆ ೨೪. ನಮ್ಮ ನಮೂನೆಯಲ್ಲಿರುವ ೫೨ ಫಲಾನುಭವಿಗಳಲ್ಲಿ ಶೇ.೭೮.೮೪ರಷ್ಟು ಕುಟುಂಬಗಳು ಬಡತನದ ರೇಖೆ ಕೆಳಗಿದ್ದವು. ಆದರೆ ಯೋಜನಾ ನಂತರ ಬಡತನದ ರೇಖೆಯ ಕೆಳಗಿದ್ದವರ ಪ್ರಮಾಣ ಶೇ.೪೬.೧೫. ಯೋಜನೆಯಿಂದಾಗಿ ನಮ್ಮ ನಮೂನೆಯಲ್ಲಿರುವ ಫಲಾನುಭವಿಗಳಲ್ಲಿ ಬಡತನದ ರೇಖೆ ಕೆಳಗಿದ್ದವರ ಪ್ರಮಾಣವು ಯೋಜನಾಪೂರ್ವ ಅವಧಿಯಿಂದ ಯೋಜನಾ ನಂತರದ ಅವಧಿಯಲ್ಲಿ ಶೇ.೭೮.೮೪ರಿಂದ ಶೇ.೪೬.೧೫ಕ್ಕೆ ಕಡಿಮೆಯಾಗಿದೆ.

ಇದರಿಂದ ಸಮಗ್ರ ಗ್ರಾಮೀಣಾಭಿವೃದ್ಧಿ ಯೋಜನೆ ಸಹಾಯದಿಂದ ಬಡತನದ ರೇಖೆ ಕೆಳಗಿರುವ ಫಲಾನುಭವಿಗಳನ್ನು ಬಡತನದ ರೇಖೆಯ ಮೇಲೆ ತರಲು ಸಾಧ್ಯವೆಂಬುದು ನಮ್ಮ ಅಧ್ಯಯನದಿಂದ ಸ್ಪಷ್ಟವಾಗಿದೆ. ಆದರೆ ನಮ್ಮ ನಮೂನೆಯಲ್ಲಿರುವ ೫೨ ಫಲಾನುಭವಿಗಳಲ್ಲಿ ಯೋಜನಾ ಪೂರ್ವದಲ್ಲಿ ಬಡತನ ರೇಖೆಯ ಮೇಲಿರುವ ಫಲಾನುಭವಿಗಳ ಪ್ರಮಾಣ ಶೇ.೨೧.೧೫. ಇವರು ವಾಸ್ತವಿಕವಾಗಿ ಸಮಗ್ರ ಗ್ರಾಮೀಣಾಭಿವೃದ್ಧಿ ಯೋಜನೆಯಡಿಯಲ್ಲಿ ನೆರವಿಗೆ ಯಾವುದೇ ರೀತಿ ಸೇರ್ಪಡೆಯಾಗಿರುವುದಿಲ್ಲ. ಆದರೆ ಇವರು ಆಯ್ಕೆಯಾಗಿದ್ದಾರೆ. ವಾಸ್ತವಿಕವಾಗಿ ಈ ಯೋಜನೆಗೆ ಕೇವಲ ಬಡತನದರೇಖೆ ಕೆಳಗಿನ ಫಲಾನುಭವಿಗಳನ್ನು ಮಾತ್ರವೇ ಆಯ್ಕೆ ಮಾಡುವುದರಿಂದ ಹೆಚ್ಚು ಉಪಯುಕ್ತವಾಗುತ್ತದೆ.

### ೩.೨.೬.ಸಾಲದ ಮರುಪಾವತಿ ಸ್ವರೂಪ

ಸಮಗ್ರ ಗ್ರಾಮೀಣಾಭಿವೃದ್ಧಿ ಯೋಜನೆಯ ಫಲಾನುಭವಿಯು ಸಾಲವನ್ನು ಮರುಪಾವತಿ ಮಾಡುವ ಹಂತಕ್ಕೆ ಬಂದಿದ್ದಾನೆ ಎಂದರೆ ಆತನ ಜೀವನ ಮಟ್ಟ ಸ್ವಲ್ಪವಾದರೂ ಸುಧಾರಿಸಿದೆ ಎಂದು ತಿಳಿಯಬಹುದು. ಮೊದಲು ಆದಾಯದ ಸ್ವಲ್ಪ ಭಾಗವನ್ನು ಮನೆ ಖರ್ಚಿಗೆ ವೆಚ್ಚ ಮಾಡಿದನಂತರ ಸಾಲವನ್ನು ಕಟ್ಟಿರುತ್ತಾನೆ. ತನ್ನ ಪರಿಸ್ಥಿತಿಯನ್ನು ಸುಧಾರಿಸಿಕೊಳ್ಳದೇ ಸಾಲ ಕಟ್ಟಿರುವವರು ಅತಿ ವಿರಳ. ಈ ಯೋಜನೆ ಅಡಿಯಲ್ಲಿ ಸಾಲ ತೆಗೆದುಕೊಂಡವರನ್ನು ನಾವು ರಾಜ್ಯ ಹಾಗೂ ರಾಷ್ಟ್ರಮಟ್ಟದಲ್ಲಿ ಗಮನಿಸಿದಾಗ ಸಾಲದ ಮರುಪಾವತಿ ಕಡಿಮೆ ಮಟ್ಟದಲ್ಲಿರುವುದು ಕಂಡುಬರುತ್ತದೆ.Balishter (೧೯೯೧) ಒಂದು ಅಧ್ಯಯನದ ಪ್ರಕಾರ ೧೯೮೬-೮೭ನೇ ಸಾಲಿನಲ್ಲಿ ಶೇ.೪೫.೩ರಷ್ಟು ಸಾಲ ಮರುಪಾವತಿಯಾಗಿರುವುದು ಕಂಡುಬರುತ್ತದೆ. ಅವರ ಅಧ್ಯಯನವನ್ನು ನಮ್ಮ ಅಧ್ಯಯನಕ್ಕೆ ಹೋಲಿಸಿಕೊಂಡರೆ ಆಗಾಧವಾದ ವ್ಯತ್ಯಾಸ ಕಂಡುಬರುತ್ತದೆ. ನಮ್ಮ ಅಧ್ಯಯನದಲ್ಲಿ ಕೇವಲ ಶೇ.೧೦ ರಷ್ಟು ಮಾತ್ರ ಸಾಲದ ಮರುಪಾವತಿ ಕಂಡುಬರುತ್ತಿವೆ. ಉಳಿದ ಕೆಲವು ಫಲಾನುಭವಿಗಳು ಒಂದು, ಎರಡು, ಮೂರು ಕಂತುಗಳನ್ನು ಕಟ್ಟಿರುವುದುನ್ನು ಕಾಣುತ್ತೇವೆ. ಹೆಚ್ಚು ಫಲಾನುಭವಿಗಳು ಸಾಲದ ಮೊತ್ತದಲ್ಲಿ ಯಾವುದೇ ಕಂತನ್ನು ಕಟ್ಟಿರುವುದಿಲ್ಲ. ಇದಕ್ಕೆಲ್ಲ ಬೇರೆ ಬೇರೆಕಾರಣಗಳಿವೆ.

ಪ್ರಸ್ತುತ ಅಧ್ಯಯನಕ್ಕೆ ಕ್ಷೇತ್ರಕಾರ್ಯ ಕೈಗೊಂಡಾಗ ತಿಳಿದಿದ್ದು ಏನೆಂದರೆ ಸಾಲ ಮರುಪಾವತಿ ಮಾಡಿದ ಪ್ರತಿಯೊಂದು ಕುಟುಂಬವು ಬಡತನದ ರೇಖೆಯ ಮೇಲಿದೆ. ಮತ್ತು ಈಗಲೂ ಸಹಾ ಅವರ ಜೀವನ ಮಟ್ಟ ಒಳ್ಳೆಯ ರೀತಿಯಲ್ಲಿದೆ. ಆದರೆ ಅವರು ಸಾಲ ತೆಗೆದುಕೊಂಡ ಉದ್ದೇಶಕ್ಕಾಗಿ ಅದನ್ನು ಬಳಸಿಕೊಂಡಿಲ್ಲ. ಒಂದೊಂದು ಚಟುವಟಿಕೆಯಿಂದ ಆದಾಯ ಕಡಿಮೆ ಬರುತ್ತದೆ ಎಂದು ತಿಳಿದ ಕೂಡಲೇ ಅದೇ ಬಂಡವಾಳವನ್ನು

ಗ್ರಂಥಾಲಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಬೇರೆ ಕೆಲಸಕ್ಕೆ ಹಾಕಿ ಉತ್ಪಾದನೆ ಕೈಗೊಂಡಿರುವುದನ್ನು ನಾವು ಕಾಣುತ್ತೇವೆ. ಯಾವುದೇ ಚಟುವಟಿಕೆಗೆ ಹಣವನ್ನು ವರ್ಗಾಯಿಸಿದರು ಉತ್ಪಾದನೆ ಅಥವಾಸೇವಾ ಕಾರ್ಯ ಮಾತ್ರ ನಿಂತಿರುವುದಿಲ್ಲ.

ನಮ್ಮ ನಮೂನೆಯಲ್ಲಿರುವ ೫೨ ಫಲಾನುಭವಿಗಳ ಕುಟುಂಬಗಳಲ್ಲಿ ಸಾಲದ ಮರುಪಾವತಿಯು ಯಾವ ಯಾವ ಹಂತದಲ್ಲಿದೆ ಎಂಬುದು ಕೋಷ್ಟಕ:೩.೭ ಮೂಲಕ ತಿಳಿಯಬಹುದಾಗಿದೆ.

042162

ಕೋಷ್ಟಕ:೩.೭ಫಲಾನುಭವಿಗಳು ಮತ್ತು ಸಾಲ ಮರುಪಾವತಿ

| ಸಂ. | ಕಂತುಗಳು | ಪುರುಷ | ಮಹಿಳೆ | ಒಟ್ಟು |
|---|---|---|---|---|
| ೧. | ಒಂದು | ೫(೯.೬೧) | ೧(೧.೯೨) | ೬(೧೧.೫೩) |
| ೨. | ಎರಡು | ೪(೭.೬೯) | ೧(೧.೯೨) | ೫(೯.೬೧) |
| ೩. | ಮೂರು | ೧(೧.೯೨) | ೨(೩.೮೪) | ೩.(೫.೭೬) |
| ೪. | ನಾಲ್ಕು | - | - | - |
| ೫. | ಎಲ್ಲವೂ | ೩.(೫.೭೬) | ೨.(೩.೮೪) | ೫(೯.೬೧) |
| ೬. | ಸಂಬಂಧವಿಲ್ಲ (ಕಟ್ಟದೇ ಇರುವವರು) | ೨೦(೩೮.೪೧) | ೧೩(೨೫) | ೩೩(೬೩.೪೬) |
| | ಒಟ್ಟು | ೩೩ | ೧೯ | ೫೨ |

'ಲಿಂಗಣ್ಣದ' ಗ್ರಂಥಾಲಯ,
ಕನ್ನಡ ವಿಶ್ವವಿದ್ಯಾಲಯ, ಹಂಪಿ

'ಲಿಂಗಣ್ಣದ' ಗ್ರಂಥಾಲಯ,
ಕನ್ನಡ ವಿಶ್ವವಿದ್ಯಾಲಯ, ಹಂಪಿ

ನಮ್ಮ ಅಧ್ಯಯನದ ೫೨ ಫಲಾನುಭವಿಗಳು ಯಾವ ಪ್ರಮಾಣದಲ್ಲಿ ಯೋಜನೆಯ ಸಾಲವನ್ನು ಮರುಪಾವತಿ ಮಾಡಿದ್ದಾರೆಎಂಬುದನ್ನು ತಿಳಿಯಬಹುದಾಗಿದೆ. ೫ ಫಲಾನುಭವಿಗಳ ಕುಟುಂಬಗಳು(ಶೇ.೯.೬೧) ಸಾಲದ ಎಲ್ಲಾ ಹಣವನ್ನು ಪಾವತಿಮಾಡಿದ್ದಾರೆ. ಅವರಲ್ಲಿ ೩ ಪುರುಷ ಫಲಾನುಭವಿಗಳು (ಶೇ.೫.೭೬) ಮತ್ತು ಎರಡು (ಶೇ.೩.೪೮) ಮಹಿಳಾ ಫಲಾನುಭವಿಗಳು ಸೇರಿದ್ದಾರೆ. ಇನ್ನು ೧೪ (ಶೇ.೨೬.೯೨) ಕುಟುಂಬಗಳು ಸಾಲದ ಕೆಲವು ಭಾಗಗಳನ್ನು ಮರುಪಾವತಿ ಮಾಡಿದ್ದಾರೆ. ಇವರಲ್ಲಿ ಒಂದೇ ಕಂತನ್ನು ಕಟ್ಟಿದವರು ೬ ಕುಟುಂಬಗಳು(ಶೇ.೧೧.೫೩) ಇವರಲ್ಲಿ ೫ಪುರುಷ ಫಲಾನುಭವಿ ಮತ್ತು ಒಬ್ಬಳು ಮಹಿಳಾ ಫಲಾನುಭವಿ ಸೇರಿದ್ದಾರೆ. ಎರಡು ಕಂತುಗಳನ್ನು ಕಟ್ಟಿದವರು. ೫(ಶೇ.೯.೬೧) ಕುಟುಂಬಗಳು. ಇವರಲ್ಲಿ ನಾಲ್ಕು(ಶೇ.೭.೬೯) ಪುರುಷ ಫಲಾನುಭವಿಯೂ ಮತ್ತು ಎರಡು (ಶೇ.೩.೮೪) ಮಹಿಳಾ ಫಲಾನುಭವಿ ಸೇರಿದ್ದಾರೆ. ಯಾವುದೇ ಸಾಲವನ್ನು ಕಟ್ಟದೇ ಇರುವ ಫಲಾನುಭವಿ ಕುಟುಂಬಗಳು ೩೩ (ಶೇ.೬೩.೪೬) ಇವರಲ್ಲಿ ೨೦(ಶೇ.೩೮.೪೬) ಪುರುಷ ಫಲಾನುಭವಿಗಳು ಇದ್ದರೆ, ೧೩(ಶೇ.೨೫) ಮಹಿಳಾ ಫಲಾನುಭವಿ ಕುಟುಂಬಗಳಿವೆ. ಕೋಷ್ಟಕ ೩.೭

ರಿಂದ ಇಷ್ಟನ್ನು ಮಾತ್ರ ವಿವರಿಸಬಹುದು. ಆದರೆ ಸಾಲವನ್ನು ಏಕೆ ಕಟ್ಟಲಾಗಿಲ್ಲ ಎಂಬುದಕ್ಕೆ ಕಾರಣಗಳನ್ನು ಫಲಾನುಭವಿಗಳ ಮೂಲಕ ತಿಳಿದುಕೊಳ್ಳಲಾಗಿದೆ.

ಒಟ್ಟಾರೆ ಯೋಜನೆಯನ್ನು ವ್ಯವಸ್ಥಿತವಾಗಿ ಉಪಯೋಗಿಸಿಕೊಂಡವರು ವಿರಳ. ಯೋಜನೆಯಲ್ಲಿ ಸಾಲ ತೆಗೆದುಕೊಂಡು ಉತ್ತಮ ರೀತಿಯಲ್ಲಿ ಉಪಯೋಗಿಸಿಕೊಂಡವರು ಸಹಾ ಮರುಪಾವತಿ ಮಾಡದೇ ಇರುವವರನ್ನು ಕಾಣುತ್ತೇವೆ. ಕೆಲವರು ನಿಯಮಿತ ವಾಗಿ ಕಟ್ಟಿದರೆ ಉಳಿದವರು ಸಾಲದ ಅಲ್ಪ ಭಾಗವನ್ನು ಮಾತ್ರ ಪಾವತಿಸಿದ್ದಾರೆ. ಸಾಲ ಕಟ್ಟದೇ ಇರುವವರು ಹೆಚ್ಚು. ಇದಕ್ಕೆ ಕಾರಣಗಳನ್ನು ಫಲಾನುಭವಿಗಳು ಈ ರೀತಿ ನೀಡುತ್ತಾರೆ. ವಿವರಣೆಗೆ ಕೋಷ್ಟಕವನ್ನು ನೋಡಬಹುದಾಗಿದೆ.

ಪ್ರಸ್ತುತದ ನಮೂನೆಯಲ್ಲಿ ೧೨ ಫಲಾನುಭವಿ (ಶೇ.೨೩.೦೭) ಕುಟುಂಬಗಳಿಗೆ ಆಸ್ತಿಗಳಿಂದ ಯಾವುದೇ ಆದಾಯ ಬರುತ್ತಿಲ್ಲ. ಇವರಲ್ಲಿ ೯(ಶೇ.೧೭.೩೦) ಪುರುಷ ಫಲಾನುಭವಿಯು ಮತ್ತು ೩ (ಶೇ.೫.೭೬) ಮಹಿಳಾ ಫಲಾನುಭವಿಯು ಸೇರಿರುತ್ತಾರೆ. ೩(ಶೇ.೫.೭೬) ಫಲಾನುಭವಿಗಳಿಗೆ ಉತ್ಪಾದಿತ ವಸ್ತುವಿಗೆ ಬೇಡಿಕೆ ಇಲ್ಲವಾಗಿದೆ. ಇವರಲ್ಲಿ ೨(ಶೇ.೩.೮೪) ಪುರುಷ ಹಾಗೂ ೧(ಶೇ.೧.೯೨) ಮಹಿಳಾ ಫಲಾನುಭವಿಗಳು ಇದ್ದಾರೆ.

ಕೋಷ್ಟಕ:೩.೮ಫಲಾನುಭವಿಗಳಿಗೆ ಸಾಲವನ್ನು ಕಟ್ಟದಿರಲು ಇರುವ ತೊಂದರೆ:

| ಸಂ. | ಉತ್ತರಗಳು | ಪುರುಷ | ಮಹಿಳೆ | ಒಟ್ಟು |
|---|---|---|---|---|
| ೧. | ಆದಾಯ ಬರುತ್ತಿಲ್ಲ | ೯(೧೭.೩೦) | ೩(೫.೭೬) | ೧೨(೨೩.೦೭) |
| ೨. | ಉತ್ಪಾದಿತ ವಸ್ತುವಿಗೆ ಬೇಡಿಕೆ ಇಲ್ಲ | ೨(೩.೮೪) | ೧(.೯೨) | ೩(೫.೭೬) |
| ೩. | ಸಾಲದ ಹಣ ಸಾಕಾಗುತ್ತಿಲ್ಲ | ೪(೭.೬೯) | ೩(೫.೭೬) | ೭(೧೩.೪೬) |
| ೪. | ಅನಾಹುತಗಳು | ೩(೫.೭೬) | ೫(೯.೬೧) | ೮(೧೫.೩೮) |
| ೫. | ಇತರೆ ಅಥವಾ ಮನ್ನಾ ಅಗುತ್ತದೆಯೆಂದು | ೧೧(೨೧.೧೫) | ೪(೭.೬೯) | ೧೫(೨೮.೮೪) |
| ೬. | ೧ ಮತ್ತು ೪ | ೦೧(೧.೯೨) | ೧(೧.೯೨) | ೨(೩.೮೪) |
| ೭. | ಅನ್ವಯಿಸುವುದಿಲ್ಲ (ಮರುಪಾವತಿ ಮಾಡಿರುವವರು) | ೩(೫.೭೬) | ೨(೩.೮೪) | ೫(೯.೬೧) |
| | ಒಟ್ಟು | ೩೩ | ೧೯ | ೫೨ |

ಸಾಲದ ಹಣ ಸಾಕಾಗುತ್ತಿಲ್ಲ ಎಂದು ೭ (ಶೇ.೧೩.೪೬) ಫಲಾನುಭವಿ ಕುಟುಂಬಗಳು ಹೇಳುತ್ತಿವೆ. ಇದರಲ್ಲಿ ೪ ಪುರುಷ ಹಾಗೂ ಮಹಿಳಾ ಫಲಾನುಭವಿಗಳು ಸೇರಿರುತ್ತಾರೆ. ಉತ್ಪಾದನೆಗೆ ಅಥವಾ ವಸ್ತುಗಳನ್ನು

ಕೊಳ್ಳಲು ಸಾಲದ ಹಣ ಸಾಕಾಗುತ್ತಿಲ್ಲ ಎನ್ನವುದನ್ನು ನಾವು ಇತರ ಅಧ್ಯಯನಗಳಲ್ಲಿಯೂ ಕಾಣುತ್ತೇವೆ. Amarchand Kaushik (೧೯೯೧) ಮತ್ತು Laxmidevi (೧೯೯೬) ಅವರ ಅಧ್ಯಯನಗಳಲ್ಲೂ ಆದಾಯ ಕಡಿಮೆ ಬರಲು ಮುಖ್ಯ ಕಾರಣ. 'ಕಡಿಮೆ ಪ್ರಮಾಣದ ಸಾಲದ ಹಣ' ಎಂದು ತಮ್ಮ ಅಧ್ಯಯನದಲ್ಲಿ ತೋರಿಸಿಕೊಟ್ಟಿದ್ದಾರೆ. ನಮೂನೆಯ ೮(ಶೇ.೧೫.೩೮) ಫಲಾನುಭವಿ ಕುಟುಂಬಗಳಲ್ಲಿ ಸಾಲ ಕಟ್ಟದೇ ಇರಲು ಇರುವ ತೊಂದರೆ ಎಂದರೆ ಅವರ ಭೌತಿಕ ಆಸ್ತಿಗಳು ಅನಾಹುತಕ್ಕೆ ಗುರಿಯಾಗಿದ್ದಾವೆ. ಇದರಿಂದ ಅವರು ಆಸ್ತಿ ಇಲ್ಲದವರಾಗಿದ್ದಾರೆ. ಇದರಿಂದ ಸಾಲ ಮರುಪಾವತಿ ಮಾಡಲಾಗಿಲ್ಲ. ಇದರಲ್ಲಿ ૩.(ಶೇ.೫.೭೬) ಪುರುಷ ಫಲಾನುಭವಿಯು ಮತ್ತು ೫ (ಶೇ.೯.೬೧) ಮಹಿಳಾ ಫಲಾನುಭವಿಯು ಸೇರಿದ್ದಾರೆ. ೧೫(ಶೇ.೨೮.೮೪) ಫಲಾನುಭವಿ ಕುಟುಂಬಗಳು ಸಾಲವು ಮನ್ನಾ ಆಗುತ್ತವೆ ಎಂದು ಕಟ್ಟುವುದನ್ನು ಬಿಟ್ಟಿದ್ದಾರೆ. ಮತ್ತು ಇವರಿಗೆ ಹಲವಾರು ಕೌಟಂಬಿಕ ಸಮಸ್ಯೆಗಳಿವೆ. ಇದರಲ್ಲಿ ೧೧(ಶೇ.೨೧.೫೧)ಪುರುಷ ಫಲಾನುಭವಿಯು ಮತ್ತು ೪ (ಶೇ.೭.೬೯) ಮಹಿಳಾ ಫಲಾನುಭವಿಯೂ ಸೇರಿದ್ದಾರೆ.

ನಮೂನೆಯಲ್ಲಿನ ಎರಡು (ಶೇ.೩.೮೪) ಫಲಾನುಭವಿ ಕುಟುಂಬಗಳು ಸಾಲ ಕಟ್ಟದಿರಲು ಅವರಿಗೆ ಇರುವಂತಹ ತೊಂದರೆ ಅವರ ಆಸ್ತಿಗಳಿಂದ ಆದಾಯ ಬರುತ್ತಿಲ್ಲ ಮತ್ತು ಅನಾಹುತಗಳು ಆಗಿದ್ದರಿಂದ ಸಾಲಕಟ್ಟಲಾಗಿಲ್ಲ. ಅನಾಹುತ ಎಂದರೆ ಹೈನುಗಾರಿಕೆಗೆ ಕೊಟ್ಟಂತಹ ಹಸು ಅಥವಾ ಎಮ್ಮೆ ಸಾಯುವುದು. ಹಾಗೂ ಯಾವುದೇ ರೀತಿಯಿಂದ ಆಸ್ತಿಗಳುಆಕಸ್ಮಿಕವಾಗಿ ನಾಶ ಹೊಂದುವುದಾಗಿದೆ. ಕೋಷ್ಟಕದಲ್ಲಿರುವ ಕೊನೆಯ ಐದು(ಶೇ.೯.೬೧) ಕುಟುಂಬಗಳು ಮಾತ್ರ ನಿಗದಿತವಾಗಿ ಸಾಲವನ್ನು ಮರುಪಾವತಿ ಮಾಡಿವೆ.

ಇಷ್ಟೆಲ್ಲ ಉತ್ತರಗಳನ್ನು ಫಲಾನುಭವಿಗಳಿಂದ ಪಡೆದಿದ್ದು. ಆದರೆ ಕೆಲವು ಫಲಾನುಭವಿಗಳಿಗೆ ಸಾಲದ ಹಣ ಹೆಚ್ಚು ಸಿಕ್ಕರೆ ನಾವು ಉತ್ತಮ ರೀತಿಯಲ್ಲಿ ಉಪಯೋಗಿಸಿಕೊಳ್ಳುತ್ತಿದ್ದೆವು ಎಂಬುದರ ಬಗ್ಗೆ ನಂಬಿಕೆಯೇ ಇಲ್ಲದಂತಾಗಿದೆ. ಒಟ್ಟಾರೆಯಾಗಿ ನಮಗೆ ಈ ಹೇಳಕೆಗಳಿಂದ ತಿಳಿದಿದ್ದು ಏನೆಂದರೆ, ಉತ್ಪಾದನೆಗೆ ಸಾಲದ ಹಣ ಸಾಕಾಗದೇ ಇರುವುದಾಗಿದೆ.

**೩.೨.೭ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯ ಸಮಸ್ಯೆಗಳು:**

ಯಾವುದೇ ಅಭಿವೃದ್ಧಿ ಯೋಜನೆಗಳಲ್ಲಿ ಸಮಸ್ಯೆಗಳಿರುವುದು ಸಾಮಾನ್ಯವಾದ ಸಂಗತಿಯಾಗಿದೆ. ಈ ಸಮಸ್ಯೆಗಳನ್ನು ಗುರುತಿಸಿ ಇವುಗಳತ್ತ ಬೆಳಕು ಚೆಲ್ಲಬೇಕಾಗಿರುವುದು ಅಧ್ಯಯನಗಳ ಕೆಲಸವಾಗಿದೆ. ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯು ಯಶಸ್ವಿಯಾಗದೇ ಇರುವುದಕ್ಕೆ ಹಲವಾರು ಕಾರಣಗಳಿವೆ. ಫಲಾನುಭವಿಗಳಿಗೆ ಯೋಜನೆಯ ಯಾವ ಸಮಸ್ಯೆಗಳು ಬಾಧಿಸುತ್ತಿವೆ ಎನ್ನುವುದನ್ನು ಅಧ್ಯಯನ

ಮಾಡುವುದು ಕೂಡ ಅವಶ್ಯಕವಾದುದಾಗಿದೆ. ಪ್ರಸ್ತುತ ಅಧ್ಯಯನದಲ್ಲಿರುವ ಸಮಸ್ಯೆಗಳು ಫಲಾನುಭವಿಗಳನ್ನು ಆಧರಿಸಿದ್ದು. ಅವರು ಹೇಳಿರುವ ಕೆಲವು ಸಮಸ್ಯೆಗಳನ್ನು ಇಲ್ಲಿ ವಿವರಿಸಲಾಗಿದೆ.

ಯೋಜನೆಯ ಕೆಲವು ಸಮಸ್ಯೆಗಳಲ್ಲಿ ಪ್ರಧಾನವಾದುದು ಸಾಲದ ಹಣ ಭೌತಿಕ ವಸ್ತುಗಳನ್ನು ಕೊಳ್ಳಲು ಸಾಕಾಗದೇ ಇರುವುದು . ಈ ಒಂದು ಸಮಸ್ಯೆಯನ್ನು ನಾವು ಇತರ ಅಧ್ಯಯನಗಳಿಂದ ಕಂಡುಕೊಂಡಿರುವುದನ್ನು ಹಿಂದಿನ ಅಧ್ಯಾಯದಲ್ಲಿ ತಿಳಿಸಲಾಗಿದೆ. ಕ್ಷೇತ್ರ ಕಾರ್ಯ ಕೈಗೊಂಡಾಗ ಫಲಾನುಭವಿಗಳು ಸಾಲದ ಮೊತ್ತದ ಬಗ್ಗೆ ಯಾವ ರೀತಿ ಪ್ರತಿಕ್ರಿಯಿಸಿದ್ದಾರೆ ಎಂಬುದನ್ನು ಕೋಷ್ಟಕ ೩.೯ರಲ್ಲಿ ವಿವರಿಸಲಾಗಿದೆ.

ಕೋಷ್ಟಕ ೩.೯ಫಲಾನುಭವಿಗಳ ಸಾಲದ ಮೊತ್ತದ ಬಗ್ಗೆ ಅಭಿಪ್ರಾಯ

| ಸ. | ಹೇಳಿಕೆ | ಪುರುಷ | ಮಹಿಳೆ | ಒಟ್ಟು |
|---|---|---|---|---|
| ೧ | ಸಾಕಾಗುತ್ತದೆ | ೧೦(೧೯.೨೩) | ೭(೧೩.೪೬) | ೧೭(೩೨.೬೯) |
| ೨ | ಸಾಕಾಗುವುದಿಲ್ಲ | ೧೮(೩೪.೬೧) | ೧೦(೧೯.೨೩) | ೨೮(೫೩.೮೪) |
| ೩ | ನಮ್ಮ ಹಣ ಸೇರಿಸುತ್ತೇವೆ | ೫(೯.೬೧) | ೧(೧.೯೨) | ೬(೧೧.೫೩) |
| ೪ | ಸಾಲಮಾಡಿ ಹಣ ಹಾಕುತ್ತೇವೆ | ---- | ೧(೧.೯೨) | ೧ (೧.೯೨) |
| | | ೩೩ | ೧೯ | ೫೨ |

ನಮೂನೆಯಲ್ಲಿರುವ ೫೨ ಫಲಾನುಭವಿ ಕುಟುಂಬಗಳಲ್ಲಿರುವ ೧೭(ಶೇ.೩೨.೬೯) ರಷ್ಟು ಫಲಾನುಭವಿ ಕುಟುಂಬಗಳು ಸಾಲದ ಹಣ ಸಾಕಾಗುತ್ತಿದೆ ಎಂದು ಹೇಳುತ್ತಿವೆ. ಇದರಲ್ಲಿ ೧೦(ಶೇ.೧೯.೨೩) ಪುರುಷ ಹಾಗೂ ೭(ಶೇ.೧೩.೪೬) ಮಹಿಳಾ ಫಲಾನುಭವಿಗಳು ಸೇರಿದ್ದಾರೆ. ಇವರಿಗೆ ನಿಜವಾಗಿ ಸಾಲದ ಹಣ ಸಾಕಾಗುತ್ತಿಲ್ಲವಾದರೂ ಅವರಿಗೆ ಸಾಲದ ಮೊತ್ತ ಹೆಚ್ಚು ಸಿಕ್ಕಿದ್ದರೆ ನಾವು ಒಳ್ಳೆಯ ರೀತಿಯಲ್ಲಿ ಉತ್ಪಾದನೆ ಮಾಡಬಹುದಾಗಿತ್ತೆಂಬ ಪರಿಕಲ್ಪನೆಯೇ ಇಲ್ಲವಾಗಿದೆ.೨೮(ಶೇ.೫೩.೮೪)ಫಲಾನುಭವಿ ಕುಟುಂಬಗಳು ಸಾಲದ ಮೊತ್ತ ಬಗ್ಗೆ ಸ್ಪಷ್ಟ ಅರಿವಿದೆ. ಯೋಜನೆಯಿಂದ ದೊರಕುವ ಸಾಲವು ಕೆಲದಿನಗಳವರೆಗಿನ ಆದಾಯವಾಗಿರುತ್ತದೆಯೇ ಹೊರತು ಅದು ಉತ್ಪಾದನೆಗೆ ನೆರವಾಗುತ್ತಿಲ್ಲ. ಒಬ್ಬನು ಕೂಲಿ ಕೆಲಸ ಬಿಟ್ಟು ಬೇರೆ ಬೇರೆ ಚಟುವಟಿಕೆ ಮಾಡಬೇಕೆಂದರೆ ಅವನಿಗೆ ಕೂಲಿಕ್ಕಿಂತ ಹೆಚ್ಚು ಆದಾಯ ಬರುತ್ತಿರಬೇಕು . ಇಲ್ಲವಾದರೆ ಅವನು ಮಾಡುವ ಚಟುವಟಿಕೆಗಳ ಬಗ್ಗೆ ಯಾವುದೇ ಜವಾಬ್ದಾರಿ ತೆಗೆದುಕೊಳ್ಳಲು ಇಚ್ಛಿಸುವುದಿಲ್ಲ. ಕಡಿಮೆ ಆದಾಯ ಬರುತ್ತದೆ ಎಂದ ತಕ್ಷಣ ಅದನ್ನು ಬಿಟ್ಟು ಮೊದಲಿನ ಕೆಲಸಕ್ಕೆ ಅಥವಾ ಇನ್ನಾವುದೋ ಕೆಲಸಕ್ಕೆ ಮರಳಲು ಬಯಸುತ್ತಾನೆ.

ಇನ್ನು ಕೆಲವು ಆರ್ಥಿಕವಾಗಿ ಸಾಧಾರಣ ಸ್ಥಿತಿಯಲ್ಲಿರುವ (ಬಡತನ ರೇಖೆಗೆ ಹತ್ತಿರವಿರುವವರು) ಫಲಾನುಭವಿಗಳು ತಮ್ಮ ಹಣವನ್ನು ಸೇರಿಸಲು ಬಯಸುತ್ತಾರೆ. ಆದರೆ ಈ ವರ್ಗದವರು ಅತಿ ಕಡಿಮೆ ಸಂಖ್ಯೆಯಲ್ಲಿದ್ದಾರೆ. ಏಕೆಂದರೆ ಈ ಯೋಜನೆಯಡಿಯಲ್ಲಿ ಬಂದವರು ಸಾಮಾನ್ಯವಾಗಿ ಬಡವರೇ ಇರುತ್ತಾರೆ. ೬ (ಶೇ.೧೧.೫೩) ಕುಟುಂಬಗಳು ಮಾತ್ರ ತಮ್ಮಲ್ಲಿರುವ ಹಣವನ್ನು ಸಾಲದ ಹಣಕ್ಕೆ ಸೇರಿಸಿ ಉತ್ಪಾದನಾ ಕಾರ್ಯ ಕೈಗೊಂಡಿರುವುದನ್ನು ನಾವು ಕಾಣುತ್ತೇವೆ . ಇವರಲ್ಲಿ ೫(ಶೇ.೯.೬೧) ಪುರುಷ ಫಲಾನುಭವಿಗಳಿದ್ದರೆ ೧(ಶೇ.೧.೯೨)ಮಹಿಳಾ ಫಲಾನುಭವಿಗಳಿದ್ದಾರೆ. ಇವರು ಸ್ವಲ್ಪ ತೊಂದರೆ (Risk) ತೆಗೆದುಕೊಳ್ಳಲು ಸಿದ್ಧರಿದ್ದಾರೆ. ಈ ರೀತಿಯಲ್ಲಿ ಪ್ರಯತ್ನ ಮಾಡುವವರ ಪ್ರಮಾಣ ಕಡಿಮೆ ಎಂದು ಹೇಳಬಹುದು.

ಒಟ್ಟಾರೆ ಹೆಚ್ಚು ಫಲಾನುಭವಿಗಳ ಉತ್ತರದಿಂದ ನಮಗೆ ತಿಳಿಯುವುದೇನೆಂದರೆ ಯೋಜನೆಯು ಕೊಡ ಮಾಡುವ ಸಾಲದ ಮೊತ್ತ ಫಲಾನುಭವಿಗಳಿಗೆ ಉತ್ಪಾದನಾ ಕಾರ್ಯಕ್ಕೆ ಸಾಲುತ್ತಿಲ್ಲ. ಇದರಿಂದ ಬರುವ ಆದಾಯ ಕಡಿಮೆಯಾಗಿ ಯೋಜನೆಯ ವಿಫಲವಾಗುತ್ತಿದೆ ಎಂಬುದು ತಿಳಿಯುತ್ತದೆ.

ನಮ್ಮ ನಮೂನೆಯಲ್ಲಿರುವ ೫೨ ಫಲಾನುಭವಿ ಕುಟುಂಬಗಳಿಗೆ ಎಷ್ಟು ಸಾಲ ಮೊತ್ತ ಸಿಕ್ಕಿದೆ ಎಂಬುದನ್ನು ಕೋಷ್ಟಕ ೩.೧೦ರಲ್ಲಿ ನೋಡಬಹುದು

ಕೋಷ್ಟಕ ೩.೧೦ಫಲಾನುಭವಿಗಳಿಗೆ ಸಿಕ್ಕ ಸಾಲದ ಹಣ:

| ಸಂ. | ರೂಗಳಲ್ಲಿ | ಲಿಂಗವಾರು | | ಒಟ್ಟು |
|---|---|---|---|---|
| | | ಪುರುಷ | ಮಹಿಳೆ | |
| ೧ | ೨೦೦೦-೫೦೦೦ | ೧೯(೩೬.೫೩) | ೧೩(೨೫) | ೩೨(೬೧,೫೩) |
| ೨ | ೫೦೦೧-೭೫೦೦ | ೧೨(೨೩.೦೭) | ೬(೧೧.೫೩) | ೧೮(೩೪.೬೧) |
| ೩ | ೭೫೦೧-೧೦,೦೦೦ | ೨(೩.೮೪) | -- | ೨(೩.೮೪) |
| ೪ | ೧೦,೦೦೧-೧೨,೦೦೦ | - | - | - |
| ೫ | ೧೨,೦೦೧-೧೫,೦೦೦ | --- | -- | -- |
| | | ೩೩ | ೧೯ | ೫೨ |

ನಮ್ಮ ನಮೂನೆಯಲ್ಲಿರುವ ಫಲಾನುಭವಿಗಳು ೧೯೮೯-೯೦ನೇ ಸಾಲಿನವರು . ಆ ವರ್ಷದಲ್ಲಿ ವಿತರಿಸಲಾದ ಹಣದ ಮೊತ್ತ ಈ ರೀತಿಯಾಗಿದೆ.೩೨ (ಶೇ.೧೧.೫೩) ಫಲಾನುಭವಿ ಕುಟುಂಬಗಳಿಗೆ ೨೦೦೦ರೂ. ದಿಂದ ೫೦೦೦ ರೂ.ಗಳವರೆಗೆ ಸಾಲ ದೊರೆತಿದೆ. ಇವರು ಸಾಮಾನ್ಯವಾಗಿ ಕೃಷಿಕರು ಮತ್ತು ಕೃಷಿ ಕಾರ್ಮಿಕರಿದ್ದಾರೆ. ಇಲ್ಲಿಯ ಫಲಾನುಭವಿಗಳು ತಮ್ಮ ಹಣವನ್ನು ಪ್ರಾಥಮಿಕ ವಲಯದಲ್ಲಿ ತೊಡಗಿಸಿದ್ದಾರೆ.

ಇವರಲ್ಲಿ ೧೯ (ಶೇ.೩೬.೫೩) ಪುರುಷ ಫಲಾನುಭವಿಗಳಿದ್ದರೆ ೧೩(ಶೇ.೨೫) ಮಹಿಳಾ ಫಲಾನುಭವಿ ಇದ್ದಾರೆ. ಉಳಿದ ೧೮ (ಶೇ.೩೪.೬೧ ) ಫಲಾನುಭವಿಗಳಿಗೆ ೫೦೦೧ ರೂ.ದಿಂದ ೭೫೦೦ ರೂ.ಗಳವರೆಗಿನ ಸಾಲ ದೊರೆತಿದೆ. ಇವರು ಸಾಮಾನ್ಯವಾಗಿ ಸೇವಾ ವಲಯದಲ್ಲಿ ತಮ್ಮ ಬಂಡವಾಳವನ್ನು ತೊಡಗಿಸಿರುವುದು ಕಂಡು ಬರುತ್ತಿದೆ. ಕಿರಾಣಿ ವ್ಯಾಪಾರ , ಹೋಟೆಲ್ , ತರಕಾರಿ ವ್ಯಾಪಾರ ಇಂತಹ ಚಟುವಟಿಕೆಗಳನ್ನು ಕೈಗೊಂಡಿರುತ್ತಾರೆ. ಇವರಲ್ಲಿ ೧೨ (ಶೇ.೨೩.೦೭) ಪುರುಷ ಹಾಗೂ ೬(ಶೇ.೧೧.೫೩) ಮಹಿಳಾ ಫಲಾನುಭವಿಗಳಿದ್ದಾರೆ. ೨(ಶೇ.೩.೮೪ ) ಫಲಾನುಭವಿ ಕುಟುಂಬಗಳಿಗೆ ಮಾತ್ರ ೭೫೦೧ ರೂ.ದಿಂದ ೧೦,೦೦೦ ರೂ.ವರೆಗಿನ ಸಾಲ ಸೌಲಭ್ಯ ಸಿಗುತ್ತಿದೆ. ಸಾಲದ ಮೊತ್ತ ಹೆಚ್ಚಾದಂತೆಲ್ಲಾ ಫಲಾನುಭವಿಗಳ ಸಂಖ್ಯೆ ಗಣನೀಯವಾಗಿ ಇಳಿಯುತ್ತಾ ಬಂದಿದೆ. ನಂತರದ ಸಾಲದ ಗುಂಪುಗಳಲ್ಲಿ ಯಾವುದೇ ಫಲಾನುಭವಿ ಇಲ್ಲದೆ ಇರುವುದನ್ನು ಕಾಣಬಹುದಾಗಿದೆ.

**೩.೨.೮ ಮಾರುಕಟ್ಟೆಯ ಸಮಸ್ಯೆಗಳು:**

ಒಂದು ವಸ್ತು ಅಥವಾ ಸೇವೆ ಒಬ್ಬನಿಂದ ಉತ್ಪಾದಿಸಲ್ಪಟ್ಟಿದೆ ಎಂದರೆ ಅದರ ಅಂತಿಮ ಗುರಿ ಮಾರಾಟವಾಗಿರುವುದರಿಂದ ಉತ್ಪಾದಿಸಲ್ಪಟ್ಟ ವಸ್ತುವಿನ ಗುರಿ ಮಾರಾಟವಾಗಿದೆ. ಒಂದು ವೇಳೆ ಅದು ಮಾರುಕಟ್ಟೆಯಲ್ಲಿ ಮಾರಾಟವಾಗದೇ ಉಳಿದಾಗ ಉತ್ಪಾದಿಸಲ್ಪಟ್ಟವರು ಸಂಕಷ್ಟಕ್ಕೆ ಗುರಿಯಾಗುತ್ತಾರೆ. ನಮ್ಮ ಅಧ್ಯಯನದಲ್ಲಿರುವ ಫಲಾನುಭವಿಗಳು ಯಾವ ರೀತಿಯಲ್ಲಿ ಮಾರುಕಟ್ಟೆಯ ಸೌಲಭ್ಯ ಹೊಂದಿದ್ದಾರೆ ಎಂದು ಕೋಷ್ಟಕ ೩.೧೧ರಲ್ಲಿ ತಿಳಿಯಬಹುದಾಗಿದೆ.

ಕೋಷ್ಟಕ ೩.೧೧ ಫಲಾನುಭವಿಗಳ ವಸ್ತುಸೇವೆಗಳಿಗೆ ಮಾರುಕಟ್ಟೆಯಲಭ್ಯತೆ:

| ಸಂ. | ಮಾರುಕಟ್ಟೆವಿಧ | ಪುರುಷ | ಮಹಿಳೆ | ಒಟ್ಟು |
|---|---|---|---|---|
| ೧ | ಸ್ವಂತ ಊರಿನಲ್ಲಿ | ೨೨(೪೨.೩೦) | ೧೦(೧೯.೨೩) | ೩೨(೬೧.೫೩). |
| ೨ | ಹತ್ತಿರದ ಮಾರುಕಟ್ಟೆಯಲ್ಲಿ | ೬(೧೧.೫೩) | ೪(೭.೬೯) | ೧೦(೧೯.೨೩) |
| ೩ | ಸುತ್ತಲಿನ ಊರುಗಳಲ್ಲಿ | ೨(೩.೮೪) | -- | ೨(೩.೮೪) |
| ೪ | ಸಂಬಂದವಿಲ್ಲ | ೩(೫.೭೬) | ೫(೯.೬೧) | ೮(೧೫.೩೮) |
| | | ೩೩ | ೧೯ | ೫೨ |

ನಮೂನೆಯಲ್ಲಿರುವ ೩೨ (ಶೇ.೬೧.೫೩ ) ಫಲಾನುಭವಿ ಕುಟುಂಬಗಳು ಸ್ವಂತ ಊರಿನಲ್ಲಿ ತಮ್ಮ ವಸ್ತು ಸೇವೆಗಳನ್ನು ಮಾರುತ್ತಿದ್ದಾರೆ. ಇವರಲ್ಲಿ ಬರುವವರೆಂದರೆ ಹೈನುಗಾರಿಕೆ ಮಾಡುವವರು, ಕೃಷಿ ಸಂಬಂಧಿ ಚಟುವಟಿಕೆ ಮಾಡುವವರು ಇದ್ದಾರೆ. ಇವರು ತಮ್ಮ ವಸ್ತುಗಳನ್ನು

ಸೇವೆಗಳನ್ನು ತಮ್ಮ ಸ್ವಂತ ಸ್ಥಳಗಳಲ್ಲಿ ಮಾರುತಿದ್ದಾರೆ. ಇದರಿಂದ ವಸ್ತುಗಳಿಗೆ ಹೆಚ್ಚಿನ ಬೆಲೆ ಸಿಗದೆ ಕಡಿಮೆ ಬೆಲೆಗೆ ಮಾರಾಟ ಮಾಡುತ್ತಿದ್ದಾರೆ. ಇದರಿಂದ ಅವರ ಆದಾಯದ ಪ್ರಮಾಣವು ಕಡಿಮೆ ಮಟ್ಟದಲ್ಲಿರುತ್ತದೆ.ಇಂತವರು ಒಟ್ಟು ೩೨ (ಶೇ.೬೧.೫೨) ಕುಟುಂಬಗಳಿದ್ದು , ಇವರಲ್ಲಿ ೨೨ (ಶೇ.೪೨.೩೦) ಪುರುಷ ಮತ್ತು ೧೦(ಶೇ.೧೯.೨೩ ) ಮಹಿಳಾ ಫಲಾನುಭವಿಯೂ ಸೇರಿದ್ದಾರೆ. ಹತ್ತಿರದ ಮಾರುಕಟ್ಟೆಯಲ್ಲಿ ೧೦ (ಶೇ.೧೯.೨೩) ಕುಟುಂಬಗಳು ತಮ್ಮ ವಸ್ತು- - - - - - - - - - - - - - - - - - - - -

--- ಸೇವೆಗಳನ್ನು ಮಾರುತ್ತಲಿವೆ. ಇವರಲ್ಲಿ ೬(ಶೇ.೧೧.೫೩) ಪುರುಷ ಫಲಾನುಭವಿಯು ಮತ್ತು ೪ (ಶೇ. ೭.೬೯) ಮಹಿಳಾ ಫಲಾನುಭವಿಯು ಸೇರಿದ್ದಾರೆ. ೨(ಶೇ.೩.೮೪) ಪುರುಷ ಫಲಾನುಭವಿ ಕುಟುಂಬಗಳು ತಮ್ಮ ವಸ್ತು ಸೇವೆಗಳನ್ನು ಸುತ್ತಲಿನ ಮಾರುಕಟ್ಟೆಯಲ್ಲಿ ಮಾರುತ್ತಿದ್ದಾರೆ. ಇಲ್ಲಿ ಕೇವಲ ಎರಡೇ ಕುಟುಂಬಗಳು ಮಾತ್ರ ಸುತ್ತಲಿನ ಮಾರುಕಟ್ಟೆಯಲ್ಲಿ ತಮ್ಮ ವಸ್ತುಗಳನ್ನು ಮಾರಲು ಶಕ್ತರಾಗಿದ್ದಾರೆ .ಉಳಿದ ೮(ಶೇ.೧೫.೩೦) ಫಲಾನುಭವಿ ಕುಟುಂಬಗಳಿಗೆ ಯಾವುದೇ ಮಾರುಕಟ್ಟೆಯ ಅವಶ್ಯಕತೆಯೇ ಇಲ್ಲ. ಏಕೆಂದರೆ ಇವರುಗಳು ತಮ್ಮ ಆಸ್ತಿಗಳಿಂದ ಬಂದ ಉತ್ಪಾದನೆಯನ್ನು ತಮ್ಮ ಮನೆ ಬಳಕೆಗಾಗಿ ಉಪಯೋಗಿಸುತ್ತಿದ್ದಾರೆ.ಇವರಲ್ಲಿ ಹೈನುಗಾರಿಕೆ ಕೆಲವು ಫಲಾನುಭವಿಗಳು ಮತ್ತು ಎತ್ತು ಬಂಡಿಯನ್ನು ತೆಗೆದುಕೊಂಡವರು ಇದ್ದಾರೆ.

**೩.೨.೯ ಫಲಾನುಭವಿಗಳ ಸ್ಥಳದಿಂದ ಮಾರುಕಟ್ಟೆ ಇರುವ ದೂರ**

ಫಲಾನುಭವಿಗಳ ಸ್ಥಳದಿಂದ ಮಾರುಕಟ್ಟೆ ದೂರವಿದ್ದರೆ ಅವರಿಗೆ ತಾವು ಉತ್ಪಾದಿಸಿದ ಸರಕನ್ನು ಸಾಗಿಸಲು ಮತ್ತು ಉತ್ಪಾದನೆಗೆ ಅವಶ್ಯ ವಸ್ತುಗಳನ್ನು ತರಲು ತೊಂದರೆಯಾಗುತ್ತದೆ. ಇದರಿಂದ ಮಾರುಕಟ್ಟೆ ಹತ್ತಿರವಿದ್ದರೆ ಫಲಾನುಭವಿಗಳಿಗೆ ಅನುಕೂಲವಾಗುತ್ತದೆ. ನಮ್ಮ ಫಲಾನುಭವಿ ಕುಟುಂಬಗಳಿಗೆ ಮಾರುಕಟ್ಟೆ ಎಷ್ಟು ದೂರದಲ್ಲಿದೆ ಎಂಬುದನ್ನು ಕೊಷ್ಟಕ ೩.೧೨ರಲ್ಲಿ ನೋಡಬಹುದಾಗಿದೆ.

ಕೊಷ್ಟಕ:೩.೧೨ಫಲಾನುಭವಿಗಳ ಸ್ಥಳದಿಂದ ಮಾರುಕಟ್ಟೆ ಇರುವ ದೂರ.

| ಸಂ. | ದೂರ | ಪುರುಷ | ಮಹಿಳೆ | ಒಟ್ಟು |
|---|---|---|---|---|
| ೧ | ೧ರಿಂದ ೩ಕಿ.ಮಿ | ೬(೧೧.೫೩) | ೨(೩.೮೯) | ೮(೧೫.೩೮) |
| ೨ | ೪ರಿಂದ ೬ಕಿ.ಮಿ | ೨(೩.೮೪) | ೧(೧.೯೨) | ೩(೫.೭೬) |
| ೩ | ೭ರಿಂದ ೧೦ಕಿ.ಮಿ | ೨(೩.೮೪) | ೧(೧.೯೨) | ೩(೫.೭೬) |
| ೪ | ೧೦ಕಿ.ಮಿಮೇಲೆ | ೮(೧೫.೩೮) | ೫(೯.೬೧) | ೧೩ (೨೫) |
| ೫ | ಸಂಬಂಧವಿಲ್ಲ | ೧೫(೨೮.೮೪) | ೧೦(೧೯.೨೩) | ೨೫(೪೮.೦೭) |
| | | ೩೩ | ೧೯ | ೫೨. |

ಕೋಷ್ಟಕ ೩.೧೨ರಲ್ಲಿ ಕಾಣುವಂತೆ ೮(ಶೇ೧೫.೩೮)ಫಲಾನುಭವಿ ಕುಟುಂಬಗಳಿಗೆ ಮಾರುಕಟ್ಟೆ ೧ರಿಂದ ೩ಕಿ.ಮಿ.ದೂರದಲ್ಲಿದೆ. ಇವರಲ್ಲಿ ೬(ಶೇ೧೧.೫೩)ಪುರುಷ ಫಲಾನುಭವಿಯೂ ಮತ್ತು ೨(ಶೇ ೩.೮೪)ಮಹಿಳಾ ಫಲಾನುಭವಿ ಕುಟುಂಬಗಳು ಸೇರಿವೆ. ೩(ಶೇ ೫.೭೬) ಫಲಾನುಭವಿ ಕುಟುಂಬಗಳಿಗೆ ಮಾರುಕಟ್ಟೆಯು ೪ರಿಂದ ೬ಕಿ.ಮಿ.ದೂರದಲ್ಲಿದೆ. ೩(ಶೇ ೫.೭೬)ಫಲಾನುಭವಿ ಕುಟುಂಬಗಳಿಗೆ ಮಾರುಕಟ್ಟೆಯು ೭ರಿಂದ ೧೦ಕಿ.ಮಿ. ದೂರದಲ್ಲಿದೆ.೧೩(ಶೇ೨೫) ಫಲಾನುಭವಿ ಕುಟುಂಬಗಳಿಗೆ ಮಾರುಕಟ್ಟೆಯು ೧೧ಕಿ.ಮಿ.ಗಿಂತ ದೂರದಲ್ಲಿದೆ. ಈ ವಿಭಾಗದಲ್ಲಿ ಸಾಮಾನ್ಯವಾಗಿ ಕುರಿ ಯೋಜನೆಯ ಫಲಾನುಭವಿಗಳು ಮತ್ತು ಕಿರಾಣಿ ವ್ಯಾಪಾರಸ್ಥರು ಬರುತ್ತಾರೆ. ಇವರು ಸ್ವಲ್ಪ ದೂರದವರೆಗೆ ಬಂದು ತಮ್ಮ ಸಾಮಾನು ತೆಗೆದುಕೊಂಡು--

--- ಇಲ್ಲವೆ ಮಾರಿ ಹೋಗುತ್ತಾರೆ. ೨೫(ಶೇ೪೮.೦೭) ಫಲಾನುಭವಿ ಕುಟುಂಬಗಳಿಗೆ ಮಾರುಕಟ್ಟೆಯ ಅವಶ್ಯಕತೆಯೇ ಇಲ್ಲದಂತಾಗಿದೆ. ಏಕೆಂದರೆ ಅವರು ತಮ್ಮ ಆಸ್ತಿಯಿಂದ ಯಾವುದೇ ತರಹದ ಉತ್ಪಾದನೆ ಮಾಡಲಾರರು. ಒಂದು ವೇಳೆ ಉತ್ಪಾದನೆ ಮಾಡಿದರೂ ಅದು ಅವರ ಉಪಭೋಗಕ್ಕೆ ಸಾಕಾಗುತ್ತಿದೆ. ಇದಕ್ಕೂ ಹೆಚ್ಚಿನ ಮಟ್ಟದಲ್ಲಿ ಅವರಿಗೆ ವಸ್ತುಗಳನ್ನು ಉತ್ಪಾದಿಸಲು ಇಲ್ಲವೆ ಸೇವಗಳನ್ನು ಮಾರಲು ಸಾಧ್ಯವಾಗುತ್ತಿಲ್ಲ. ಇಂತಹ ಪರಿಸ್ಥಿತಿ ಈ ೨೫ ಕುಟುಂಬಗಳಲ್ಲಿದೆ. ಇದೇ ರೀತಿ ಕೆಲವು ದಿನಗಳಾದ ನಂತರ ತಮ್ಮ ಆಸ್ತಿಗಳಿಂದ ದೂರವಾಗಿ ತಮ್ಮ ಪೂರ್ವದ ಕೆಲಸಕ್ಕೆ ಮರುಳುತಿದ್ದಾರೆ.

ಮೂಲಭೂತ ಸೌಲಭ್ಯಗಳು:- ಒಂದು ಯೋಜನೆಯು ಯಶಸ್ವಿಯಾಗಬೇಕಾದಾಗ ಅಲ್ಲಿರುವ ಫಲಾನುಭವಿಗಳಿಗೆ ಮೂಲಭೂತ ಸೌಲಭ್ಯಗಳು ಅವಶ್ಯಕ. ಸಾರಿಗೆ, ವಿದ್ಯುತ್, ಬ್ಯಾಂಕ್ ಸೌಕರ್ಯಗಳು ಅವಶ್ಯಕ. ಬ್ಯಾಂಕ್ ಸೌಲಭ್ಯಗಳನ್ನು ಈ ಹಿಂದೆ ವಿವರಿಸಿದೆ. ಸಧ್ಯ ಈಗ ಫಲಾನುಭವಿಗಳಿಗೆ ಯಾವ ರೀತಿಯಲ್ಲಿ ಸಾರಿಗೆ ಸೌಲಭ್ಯವಿದೆ ಎಂಬುದನ್ನು ಇಲ್ಲಿ ವಿವರಿಸಲಾಗುತ್ತದೆ. ಕಿರಾಣಿ ವ್ಯಾಪಾರಸ್ಥರಿಗೆ ಹೈನುಗಾರಿಕೆ ಫಲಾನುಭವಿಗಳಿಗೆ. ಚಿಲ್ಲರೆ ವ್ಯಾಪಾರಸ್ಥರಿಗೆ ಯಾವ ರೀತಿಯಲ್ಲಿ ಸಾರಿಗೆ ಸೌಲಭ್ಯಗಳು ಇವೆ ಎಂಬುದನ್ನು ನಾವು ಕೋಷ್ಟಕ ೩.೧೩ರಲ್ಲಿ ನೋಡಬಹುದಾಗಿದೆ.

ಕೋಷ್ಟಕ:೩.೧೩ಫಲಾನುಭವಿಗಳ ಸ್ಥಳಕ್ಕೆ ಸಾರಿಗೆ ಸೌಲಭ್ಯ.

| ಸಂ | ಉತ್ತರ | ಪುರುಷ | ಮಹಿಳೆ | ಒಟ್ಟು |
|---|---|---|---|---|
| ೧ | ಇದೆ | ೧೩(೨೫) | ೫(೯.೬೧) | ೧೮(೩೪.೬೧) |
| ೨ | ಇಲ್ಲ | ೧(೧.೯೨) | - | ೧ (೧.೯೨) |
| ೩ | ಅನಿಯಮಿತ | ೨(೩.೮೪) | - | ೨(೩.೮೪) |
| ೪ | ಸಂಬಂಧವಿಲ್ಲ | ೧೭(೩೨.೬೯) | ೧೪(೨೬.೯೨) | ೩೧(೫೯.೬೧) |
| | | ೩೩ | ೧೯ | ೫೨. |

ನಮೂನೆಯಲ್ಲಿರುವ ೧೮(ಶೇ೩೪.೬೧) ಫಲಾನುಭವಿ ಕುಟುಂಬಗಳಿಗೆ ಸಾರಿಗೆ ಸೌಲಭ್ಯವಿದೆ. ಇಲ್ಲಿರುವ ಫಲಾನುಭವಿಗಳು ತಾಲ್ಲೂಕಿನ ಕೇಂದ್ರಕ್ಕೆ ಹತ್ತಿರ ಇರುವುದರಿಂದ ಸಾರಿಗೆ ವ್ಯವಸ್ಥೆ ಸ್ವಲ್ಪಮಟ್ಟಿನಲ್ಲಿ ಇದೆ ಎಂದು ಹೇಳಬಹುದು. ಆದರೆ ಇದೇ ರೀತಿಯ ಸೌಕರ್ಯ ತಾಲ್ಲೂಕಿನ ಇತರ ಕಡೆ ಕಾಣುವುದಿಲ್ಲ. ೧(ಶೇ೧.೯೨) ಫಲಾನುಭವಿಗೆ ಸಾರಿಗೆ ಸೌಲಭ್ಯವೇ ಇಲ್ಲವಾಗಿದೆ. ೨(ಶೇ೩.೮೪) ಫಲಾನುಭವಿಗೆ ಸಾರಿಗೆ ಸೌಲಭ್ಯ ಅನಿಯಮಿತದಿಂದ ಕೂಡಿದೆ. ೩೧(ಶೇ. ೫೯.೬೧) ಫಲಾನುಭವಿ ಕುಟುಂಬಗಳಿಗೆ ಯಾವುದೇ ರೀತಿಯಲ್ಲಿ ಸಾರಿಗೆ ಸೌಲಭ್ಯದ ಅವಶ್ಯಕತೆಯೇ ಇಲ್ಲವಾಗಿದೆ. ಏಕೆಂದರೆ ಅವರು ಆಸ್ತಿಯನ್ನು ಬಳಸಿಕೊಳ್ಳದವರಾಗಿದ್ದಾರೆ. ಈ ಫಲಾನುಭವಿಗಳು ಯಾವುದೇ ಉತ್ಪಾದನಾ ಕಾರ್ಯದಲ್ಲಿ ತೊಡಗಿರುವುದಿಲ್ಲ. ಇದರಿಂದ ಇವರಿಗೆ ಸಾರಿಗೆಯ ಅವಶ್ಯಕತೆಯೇ ಬೇಡವಾಗಿದೆ. ಈ ಗುಂಪಿನಲ್ಲಿರುವ ಫಲಾನುಭವಿಗಳಿಗೆ ಸಾರಿಗೆಯು ಅನಿಯಮಿತವಾಗಿ ಇರುತ್ತದೆ.

**೩.೨.೧೦ ಶಿಕ್ಷಣ ಮತ್ತು ಸಮಗ್ರ ಗ್ರಾಮಿಣ ಅಭಿವೃದ್ಧಿಯೋಜನೆ:-**

ಶಿಕ್ಷಣ ಮಾನವನ ಅಭಿವೃದ್ಧಿಗೆ ಮೂಲಭೂತ ಸಾಧನವಾಗಿದೆ. ಸಾಕ್ಷರತೆಯ ಪ್ರಮಾಣ ಹೆಚ್ಚಿದ ಕಡೆಯಲ್ಲಿ ಮಾನವನ ಅಭಿವೃದ್ಧಿಯನ್ನು ಕಾಣುತ್ತೇವೆ. ಸಾಕ್ಷರತೆ ಹೆಚ್ಚಿರುವ ಕೇರಳ ರಾಜ್ಯದಲ್ಲಿ ಮಾನವ ಅಭಿವೃದ್ಧಿ ಮತ್ತು ಯೋಜನೆಗಳು ಪ್ರಗತಿಯಲ್ಲಿರುವುದು ನಮ್ಮ ಅನುಭವಕ್ಕೆ ಬಂದ ಸಂಗತಿಯಾಗಿದೆ.(ದೇವಿ ೧೯೯೬) ಮತ್ತು (ಸಿಂಗ್ ೧೯೯೫), ಸಾಕ್ಷರತೆ ಅಥವ ಶಿಕ್ಷಣ ಹೊಂದಿದವರು ಯೋಜನೆಯನ್ನು ಫಲಪ್ರದವನ್ನಾಗಿಸಿಕೊಂಡಿದ್ದಾರೆ ಎಂದು ಹೇಳಬಹುದು. ರಾಷ್ಟ್ರ ಮತ್ತು ರಾಜ್ಯ ಮಟ್ಟದಲ್ಲಿಯೂ ಸಹ ಇದೇ ಫಲಿತಾಂಶಗಳು ಕೆಲವು ಅಧ್ಯಯನಗಳಿಂದ ತಿಳಿಯುತ್ತದೆ.

ನಮ್ಮ ನಮೂನೆಯಲ್ಲಿರುವ ಐವತ್ತೆರಡು ಫಲಾನುಭವಿ ಕುಟುಂಬಗಳಲ್ಲಿ ಎಷ್ಟು ಅಕ್ಷರಸ್ಥರಿದ್ದಾರೆ, ಮತ್ತು ಎಷ್ಟು ಅನಕ್ಷರಸ್ಥರಿದ್ದಾರೆ ಎನ್ನುವುದನ್ನು ತಿಳಿಸಲಾಗಿದೆ. ಅದೇ ರೀತಿಯಲ್ಲಿ ಶಿಕ್ಷಣ ಪಡೆದವರು ಬಡತನ ರೇಖೆಯ ಮೇಲೆ ಎಷ್ಟು ಬಂದಿದ್ದಾರೆ ಎಂದು ಕೋಷ್ಟಕ ೩.೧೪ರಲ್ಲಿ ತಿಳಿಯಬಹುದು.

ಪ್ರಸ್ತುತ ಅಧ್ಯಯನದಲ್ಲಿ ೨೩(ಶೇ ೪೪.೨೩) ಫಲಾನುಭವಿ ಕುಟುಂಬಗಳು ಅಕ್ಷರಸ್ಥರಿದ್ದಾರೆ. ಉಳಿದ ೨೯(ಶೇ೫೫.೭೬) ಫಲಾನುಭವಿ ಕುಟುಂಬಗಳು ಅನಕ್ಷರಸ್ಥರಿದ್ದಾರೆ .ಅಕ್ಷರಸ್ಥ ೨೩ ಫಲಾನುಭವಿ ಕುಟುಂಬಗಳಲ್ಲಿ ೧೯(ಶೇ೩೬.೫೩)ಪುರುಷ ಫಲಾನುಭವಿಗಳು ಮತ್ತು ೪(ಶೇ೭.೬೯)ಮಹಿಳಾ ಫಲಾನುಭವಿಗಳೂ ಸೇರಿದ್ದಾರೆ. ೧೯ ಪುರುಷ ಫಲಾನುಭವಿ ಕುಟುಂಬಗಳಲ್ಲಿ ೧೩(ಶೇ೨೫)ಕುಟುಂಬಗಳು ಬಡತನ ರೇಖೆಯ ಕೆಳಗಡೆ ಇದ್ದಾರೆ. ಉಳಿದ ೬(ಶೇ೧೧.೫೩)ಕುಟುಂಬಗಳು ಬಡತನ ರೇಖೆಯ ಮೇಲೆ ಬಂದಿದ್ದಾರೆ.

ಕೋಷ್ಟಕ ೩.೧೪ ಯೋಜನೆ ಪೂರ್ವ ಹಾಗು ಯೋಜನೆ ನಂತರ ಸಾಕ್ಷರತೆ ಪ್ರಕಾರ ಫಲಾನುಭವಿಗಳ ವಿಂಗಡಣೆ.

| ವಿಧ | ಬಿ.ಪಿ.ಎಲ್.ಕೆಳಗೆ | ಬಿ.ಪಿ.ಎಲ್.ಮೇಲೆ | ಒಟ್ಟು |
|---|---|---|---|
| ಅಕ್ಷರಸ್ಥರು | ಪು:೧೩(೨೫)<br>ಮ:೨(೩.೮೪)<br>ಒ:೧೫(೨೮.೮೪) | ಪು:೬(೧೧.೫೩)<br>ಮ:೨(೩.೮೪)<br>ಒ:೮(೧೫.೩೮) | ೧೯(೩೬.೫೩)<br>೪ (೭.೬೯)<br>೨೩(೪೪.೨೩) |
| ಅನಕ್ಷರಸ್ಥರು | ಪು:೧೨(೨೩.೦೭)<br>ಮ:೧೪(೨೬.೯೨)<br>ಒ: ೨೬ (೫೦) | ಪು:೨(೩.೮೪)<br>ಮ:೧(೧.೯೨)<br>ಒ: ೩(೫.೭೬) | ೧೪(೨೬.೯೨)<br>೧೫(೨೮.೮೪)<br>೨೯(೫೫.೭೬) |
| ಒಟ್ಟುಪುರುಷರು<br>ಒಟ್ಟುಮಹಿಳೆಯರು | ಪು:೨೫(೪೮.೦೭)<br>ಮ:೧೬(೩೦.೭೬) | ಪು:೮(೧೫.೩೮)<br>ಮ:೩(೫.೭೬) | ೫೨(೧೦೦.೦೦) |
| ಒಟ್ಟು | ೪೧ | ೧೧ | ೫೨ |

೪(ಶೇ೭.೬೯)ಮಹಿಳಾ ಅಕ್ಷರಸ್ಥ ಫಲಾನುಭವಿ ಕುಟುಂಬಗಳ ಪೈಕಿ ೨(ಶೇ೩.೮೪)ಬಡತನ ರೇಖೆಯ ಕೆಳಗಡೆ ಇದ್ದರೆ ೨ ಕುಟುಂಬಗಳು ಬಡತನ ರೇಖೆಯ ಮೇಲೆ ಬಂದಿವೆ. ಮಹಿಳಾ ಅಕ್ಷರಸ್ಥ ಫಲಾನುಭವಿಗಳು ಶೇ. ೫೦ರಷ್ಟು ಬಡತನ ರೇಖೆಯ ಮೇಲೆ ಬಂದಿರುವುದು ಗೋಚರಿಸುತ್ತದೆ.

ಅನಕ್ಷರಸ್ಥ ಫಲಾನುಭವಿ ಕುಟುಂಬಗಳೂ ೨೯(ಶೇ೫೫.೭೬)ಇವೆ. ಇವರಲ್ಲಿ ೧೪(ಶೇ೨೬.೯೨)ಪುರುಷ ಫಲಾನುಭವಿಗಳಿದ್ದರೆ ೧೫(ಶೇ೨೮.೮೪)ಮಹಿಳಾ ಫಲಾನುಭವಿಗಳ ಪೈಕಿ ೪ ಫಲಾನುಭವಿಗಳು ಮಾತ್ರ ಅಕ್ಷರಸ್ಥರು. ಉಳಿದವರೆಲ್ಲಾ ಅನಕ್ಷರಸ್ಥರು . ತಾಲ್ಲೂಕಿನಲ್ಲಿ ಮಹಿಳಾ ಸಾಕ್ಷರರು ೧೯೯೧ರ ಜನಗಣತಿ ಪ್ರಕಾರ ಶೇ.೨೬. ಇದರಿಂದ ನಮ್ಮ ನಮೂನೆಯಲ್ಲಿಯೂ ಅಕ್ಷರಸ್ಥ ಮಹಿಳೆಯರ ಪ್ರಮಾಣ ಕಡಿಮೆ ಇದೆ. ಅನಕ್ಷರಸ್ಥ ೧೪ ಫಲಾನುಭವಿ ಪುರುಷ ಕುಟುಂಬಗಳ ಪೈಕಿ ೧೨(ಶೇ೨೩.೦೭)ಬಡತನ ರೇಖೆಯ ಮೇಲೆ ಬಂದಿವೆ. ಮಹಿಳೆಯರು ಸಾಕ್ಷರರಾದಲ್ಲಿ ಯೋಜನೆಯನ್ನು ಚೆನ್ನಾಗಿ ಉಪಯೋಗಿಸಿಕೊಳ್ಳಬಹುದಾಗಿದೆ. ಅನಕ್ಷರಸ್ಥರಲ್ಲಿ ಸ್ತ್ರಿಯರು ಹೆಚ್ಚು ಇರುವುದರಿಂದ ೧ ಕುಟುಂಬವು ಮಾತ್ರ ಬಡತನ ರೇಖೆಯ ಮೇಲೆ ಬರಲು ಸಾಧ್ಯವಾಗಿದೆ.

ಇದರಿಂದ ನಮ್ಮ ಗಮನಕ್ಕೆ ಬರುವುದೇನೆಂದರೆ ಸಾಕ್ಷರಸ್ಥ(ಅಕ್ಷರಸ್ಥ) ಫಲಾನುಭವಿಗಳು ತಮ್ಮ ಜೀವನದ ಪರಿಸ್ಥಿತಿಯನ್ನು ಸುಧಾರಿಸಿಕೊಳ್ಳುವಲ್ಲಿ ಪ್ರಯತ್ನಿಸಿದ್ದಾರೆ. ಅನಕ್ಷರಸ್ಥರು ಯೋಜನೆಯನ್ನು ಉಪಯೋಗಿಸಿಕೊಳ್ಳದೆ ಮೊದಲಿನ ಸ್ಥಿತಿಯಲ್ಲಿಯೇ ಇದ್ದಾರೆ ಎಂದು ತಿಳಿಯುತ್ತದೆ .

## ಅಧ್ಯಾಯ-೪

### ಅಧ್ಯಯನದಿಂದ ಕಂಡು ಕೊಂಡ ತಥ್ಯಗಳು

ಈ ಅಧ್ಯಾಯದಲ್ಲಿ ನಾವು ಕೈಗೊಂಡ ಅಧ್ಯಯನ, ಸಂಗ್ರಹಿಸಿದ ಮಾಹಿತಿ ಹಾಗೂ ನಡೆಸಿದ ವಿಶ್ಲೇಷಣೆಗಳ ಹಿನ್ನೆಲೆಯಲ್ಲಿ ಕಂಡುಕೊಂಡ ತಥ್ಯಗಳನ್ನು ಕ್ರೋಢೀಕರಿಸುವ ಒಂದು ಪ್ರಯತ್ನ ನಡೆಸಲಾಗಿದೆ. ನಾವು ಕಂಡುಕೊಂಡ ತಥ್ಯಗಳನ್ನು ಕ್ರೋಢೀಕರಿಸುವ ಒಂದು ಪ್ರಯತ್ನ ನಡೆಸಲಾಗಿದೆ. ನಾವು ಕಂಡುಕೊಂಡ ತಥ್ಯಗಳನ್ನು ಮೂರು ನೆಲೆಗಳಲ್ಲಿ ಮಂಡಿಸಲು ಯೋಜಿಸಲಾಗಿದೆ. ಮೊದಲನೆಯದಾಗಿ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯ ಅನುಷ್ಠಾನ ಪ್ರಕ್ರಿಯೆಗೆ ಸಂಬಂಧಿಸಿದ ತಥ್ಯಗಳನ್ನು ಮಂಡಿಸಲಾಗುತ್ತದೆ. ಎರಡನೆ ಭಾಗದಲ್ಲಿ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯ ಅನುಷ್ಠಾನದಿಂದ ಫಲಾನುಭವಿಗಳ ವರಮಾನ, ಸಾಲ ಮರು ಪಾವತಿ, ಆಸ್ತಿಯ ಉಪಯೋಗ ಮುಂತಾದವುಗಳ ಮೇಲೆ ಉಂಟಾದ ಪರಿಣಾಮಗಳಿಗೆ ಸಂಬಂಧಿಸಿದ ತಥ್ಯಗಳನ್ನು ವಿವರಿಸಲಾಗಿದೆ. ಮೂರನೇ ಭಾಗದಲ್ಲಿ ಗ್ರಾಮೀಣ ಅಭಿವೃದ್ಧಿ ಸ್ವರೂಪ-ಸರ್ಕಾರದ ನೀತಿ ಮುಂತಾದ ಸೈದ್ಧಾಂತಿಕ ಹಾಗೂ ಸಾಧಾರಣೀಕೃತ ವಿಚಾರಗಳ ಚರ್ಚೆ ಇದೆ.

### ಭಾಗ-೧

### ೪.೧.೧ ಅನುಷ್ಠಾನ ಪ್ರಕ್ರಿಯೆ

ಈ ಪ್ರೌಢ ಪ್ರಬಂಧದ ಮೂರನೇ ಅಧ್ಯಾಯದಲ್ಲಿ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯ ಅನುಷ್ಠಾನ ಪ್ರಕ್ರಿಯೆಗೆ ಸಂಬಂಧಿಸಿದಂತೆ ನಾವು ಈ ಅಧ್ಯಯನಕ್ಕಾಗಿ ಸಂಗ್ರಹಿಸಿದ ಮಾಹಿತಿಯನ್ನು ವಿಶ್ಲೇಷಿಸಿದ್ದೇವೆ. ಪ್ರಸ್ತುತ ನಾವು ನಡೆಸಿದ ವಿಶ್ಲೇಷಣೆಯ ಫಲಿತಾಂಶಗಳನ್ನು ಇಲ್ಲಿ ವಿವರವಾಗಿ ಪರಿಶೀಲಿಸಲಾಗಿದೆ.

ಅಭಿವೃದ್ಧಿ ಕಾರ್ಯಕ್ರಮವನ್ನು ಹೀಗೆ ಎರಡು ಭಾಗಗಳನ್ನಾಗಿ ಮಾಡಿಕೊಂಡು ಅಧ್ಯಯನ ನಡೆಸುವುದರಿಂದ ಕೆಲವು ಅನುಕೂಲಗಳಿವೆ. ವಾಸ್ತವವಾಗಿ ಪ್ರತಿಯೊಂದು ಅಭಿವೃದ್ಧಿ ಕಾರ್ಯಕ್ರಮದ ಮೌಲ್ಯ ಮಾಪನವು ಹೀಗೆ ಅನುಷ್ಠಾನ ಪ್ರಕ್ರಿಯೆ ಹಾಗೂ ಪರಿಣಾಮಗಳನ್ನು ಒಳಗೊಳ್ಳುವುದು ಅಪೇಕ್ಷಣೀಯ. ಅನೇಕ ಭಾರಿ ಪ್ರಕ್ರಿಯೆಯಲ್ಲಿನ ವ್ಯತ್ಯಯಗಳಿಂದಾಗಿ ಕಾರ್ಯ ಯೋಜನೆ ನಿರೀಕ್ಷಿಸಿದ ಪರಿಣಾಮವನ್ನು ಬೀರುವುದರಲ್ಲಿ ವಿಫಲವಾಗಬಹುದು. ಈ ಪ್ರಕ್ರಿಯೆಯು ಮುಖ್ಯವಾಗಿ ಆಡಳಿತ-ಅನುಷ್ಠಾನ ಕಾರ್ಯಗಳಿಗೆ

ಸಂಬಂಧಿಸಿದುದಾಗಿದೆ. ಅಭಿವೃದ್ಧಿ ಕಾರ್ಯಕ್ರಮಗಳ ಯಶಸ್ಸು ಅಥವಾ ವೈಫಲ್ಯವು ಅಧಿಕಾರಿ ಶಾಹಿಯ ಸ್ವರೂಪವನ್ನು ಅವಲಂಬಿಸಿರುತ್ತದೆ. ನಿಜವಾಗಿ ಹೇಳಬೇಕೆಂದರೆ ಅಧಿಕಾರಶಾಹಿಯು ಸಮಾಜದ ಏಣಿ ಶ್ರೇಣಿಯಲ್ಲಿ ಉನ್ನತ ವರ್ಗದ ಹಿತಾಶಕ್ತಿಗಳನ್ನು ಪ್ರತಿನಿಧಿಸುತ್ತಿರುತ್ತದೆ. ಸಾಮಾಜಿಕ ಹಾಗೂ ರಾಜಕೀಯ ಗತಿಶೀಲತೆಯಿಂದ ಅಧಿಕಾರ ಶಾಹಿ ಅಲಾಯದವಿರಲು ಸಾಧ್ಯವಿಲ್ಲ.

ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯ ಅನುಷ್ಠಾನಕ್ಕೆ ಸಂಬಂಧಿಸಿದಂತೆ ಮೊದಲ ಹೆಜ್ಜೆ ಎಂದರೆ ಫಲಾನುಭವಿಗಳ ಆಯ್ಕೆ. ಈ ಯೋಜನೆಯ ಮೂಲ ನಿಬಂಧನೆ ಎಂದರೆ ಬಡತನದ ರೇಖೆಯ ಕೆಳಗಿರುವ ಕುಟುಂಬಗಳು ಮಾತ್ರ ಈ ಯೋಜನೆಯ ವ್ಯಾಪ್ತಿಗೆ ಸೇರುತ್ತವೆ. ಸದರಿ ಫಲಾನುಭವಿಗಳ ಆಯ್ಕೆ ಪಾರದರ್ಶಕವೂ-ಸಹಭಾಗಿತ್ವವೂ ಆಗಿರಬೇಕು ಎಂಬ ಉದ್ದೇಶದಿಂದ ಫಲಾನುಭವಿಗಳ ಆಯ್ಕೆಯನ್ನು 'ಗ್ರಾಮ ಸಭೆ' ಗಳಿಗೆ ನೀಡಲಾಗಿದೆ. ಗ್ರಾಮ ಸಭೆಗಳಲ್ಲಿ ಬಡತನದ ರೇಖೆಯ ಕೆಳಗೆ ಜೀವಿಸುತ್ತಿರುವ ಕಡು ಬಡವ ಕುಟುಂಬಗಳನ್ನು ಫಲಾನುಭವಿಗಳಾಗಿ ಆಯ್ಕೆ ಮಾಡಬೇಕೆಂಬುದು ಈ ಯೋಜನೆಯ ಬಹುಮುಖ್ಯ ಲಕ್ಷಣವಾಗಿದೆ.

ನಮ್ಮ ಅಧ್ಯಯನದಲ್ಲಿ ಹಗರಿಬೊಮ್ಮನಹಳ್ಳಿ ತಾಲ್ಲೂಕಿನಲ್ಲಿ ಕೆಲವು ಗ್ರಾಮ ಸಭೆಗಳಿಗೆ ಭೇಟಿ ನೀಡಿದಾಗ ಅಲ್ಲಿನ ನಡಾವಳಿಯನ್ನು ನೋಡಿ ತೀವ್ರ ಅಸಮಧಾನವಾಯಿತು. ಪಂಚಾಯತ್ ರಾಜ್ಯ ಸಂಸ್ಥೆಗಳ ಅಧಿಕಾರಿಗಳನ್ನು ಸಂದರ್ಶಿಸಿ ವಿಷಯದ ಬಗ್ಗೆ ಚರ್ಚಿಸಿದಾಗಿ ತಿಳಿದು ಬಂದ ಸಂಗತಿ ಏನೆಂದರೆ ಫಲಾನುಭವಿಗಳನ್ನು ಯೋಜನೆಯಲ್ಲಿನ ನಿಬಂಧನೆ ಪ್ರಕಾರ ಯಾವಾಗಲೂ ಆಯ್ಕೆ ಮಾಡುವುದಿಲ್ಲ. ಗ್ರಾಮ ಸಭೆಗಳಲ್ಲೇ ಆಯ್ಕೆ ಮಾಡಿದರೂ ಕೂಡ ಪಟ್ಟಬಧ್ರರ ಹಿತಾಸಕ್ತಿಗಳಿಗೆ ಅನುಗುಣವಾಗಿ ಆಯ್ಕೆ ನಡೆಯುತ್ತದೆ. ಇದು ಈ ಯೋಜನೆಯ ಕ್ಯಾನ್ಸರ್ ಸ್ವರೂಪದ ವ್ಯಾಧಿಯಾಗಿದೆ. ನಮ್ಮ ನಮೂನೆಯಲ್ಲಿರುವ ೫೨ ಮಂದಿ ಫಲಾನುಭವಿಗಳಲ್ಲಿ ಶೇ ೭೦ ರಷ್ಟು ಗ್ರಾಮ ಸಭೆಯಿಂದಲೇ ಆಯ್ಕೆಯಾಗಿದ್ದಾರೆ. ಗ್ರಾಮ ಸಭೆಗಳಿಂದ ಆಯ್ಕೆಯಾಗಿದ್ದಾರೆ ಎಂಬ ಕಾರಣದಿಂದ ಅರ್ಹರು ಆಯ್ಕೆಯಾಗಿದ್ದಾರೆ, ಕಡು ಬಡವರು ಆಯ್ಕೆಯಾಗಿದ್ದಾರೆ ಎಂದು ಹೇಳಲು ಸಾಧ್ಯವಿಲ್ಲ. (ಜೀನ್ ಡ್ರೀಜೆ,೧೯೯೪).

೪.೧.೨: ಸಂಘಟನಾತ್ಮಕ ಮತ್ತು ಆಡಳಿತಾತ್ಮಕ ಕಾರ್ಯಕ್ರಮ

ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯ ಅನುಷ್ಠಾನ ಪ್ರಕ್ರಿಯೆಯನ್ನು ಸೂಕ್ಷ್ಮವಾಗಿ ಪರಿಶೀಲಿಸಿದ ಮೇಲೆ ನಮಗನ್ನಿಸಿದ ಸಂಗತಿ ಎಂದರೆ ಇದೊಂದು ಮೇಲಿನಿಂದ ವಿಧಿಸಿದ ಆಡಳಿತಾತ್ಮಕ ಕಾರ್ಯಕ್ರಮವಾಗಿದೆ. ಜನರ ಸಂಘಟನೆ ಮೂಲಕ ಕೆಳಹಂತದಿಂದ ಮೂಡಿ ಬಂದ ಕಾರ್ಯಕ್ರಮವಲ್ಲ. ಈ ಕಾರಣದಿಂದಲೇ

ಇದು ಬಡವರಿಗೆ ಪರಿಹಾರ ಒದಗಿಸುವ, ಬಡತನದ ಕಿಚ್ಚನ್ನು ಶಮನಗೊಳಿಸುವ ಕಾರ್ಯಕ್ರಮವಾಗಿದೆ. (ವಿನೋದ್ ವ್ಯಾಸುಲು,೧೯೯೫).ಇದೊಂದು ಆಡಳಿತಾತ್ಮಕ ಕಾರ್ಯಕ್ರಮವಾಗಿರುವುದರಿಂದ ಇಲ್ಲಿ ಸಹಭಾಗಿತ್ವ ನಿಜವಾದ ಅರ್ಥದಲ್ಲಿ ಸಾಧ್ಯವಿಲ್ಲ. ಇದೊಂದು ಆಡಳಿತಾತ್ಮಕ ಕಾರ್ಯಕ್ರಮವಾಗಿರುವುದರಿಂದ ಈ ಕಾರ್ಯಕ್ರಮದಡಿಯಲ್ಲಿ ಬರುವ ಅರ್ಹ ಫಲಾನುಭವಿಗಳು ಸದರಿ ಕಾರ್ಯಕ್ರಮದ ಸೌಲಭ್ಯವನ್ನು ತಮ್ಮ ಹಕ್ಕು ಎಂದು ಭಾವಿಸುವುದಿಲ್ಲ. ಸರ್ಕಾರವು ಬಡವರಿಗೆ ಔದಾರ್ಯ ಮನೋಭಾವದಿಂದ ನೀಡುತ್ತಿರುವ ಪರಿಹಾರ ಎಂಬ ಮನೋಭಾವ ಜನತೆಯಲ್ಲಿ ಮೂಡಿದೆ.

ವಾಸ್ತವವಾಗಿ ಇಲ್ಲಿ ನಮಗೆ ಕೆಲವು ಪ್ರಶ್ನೆಗಳನ್ನು ಕೇಳಲು ಮನಸ್ಸಾಗುತ್ತಿದೆ. ಫಲಾನುಭವಿಗಳನ್ನು ಆಯ್ಕೆ ಮಾಡಲು ಗ್ರಾಮಸಭೆಗೆ ಏನು ಅಧಿಕಾರ? ತಾಲ್ಲೂಕು ಪಂಚಾಯತಿ ಮುಖ್ಯ ಅಧಿಕಾರಿಗೆ ಏನು ಅಧಿಕಾರ? ಇವರೆಲ್ಲ ಯಾರು? ಈ ಕಾರ್ಯಕ್ರಮದ ಆಶ್ರಯದಲ್ಲಿ ಒದಗಿಸಲಾದ ಸೌಲಭ್ಯಗಳನ್ನು ಅರ್ಹರಾದವರು ಒತ್ತಾಯದಿಂದ ಪಡೆಯುವಂತಾಗಬೇಕು.ಫಲಾನುಭವಿಗಳ ಅರ್ಹತೆಯನ್ನು ಗುರುತಿಸಲು ಮಧ್ಯವರ್ತಿಗಳು ಏಕೆ?

ಬಡ ವರ್ಗದ ಜನತೆಯ ಬಡತನವನ್ನು ನಿವಾರಿಸುವುದು ಸಧ್ಯ ಒಂದು ನೈತಿಕ ಜವಾಬ್ದಾರಿ ಎಂಬಂತೆ ಭಾವಿಸಲಾಗಿದೆ. ಅದು ನಿಜವಲ್ಲ. ಇದೊಂದು ರಾಜಕೀಯ-ಸಾಮಾಜಿಕ-ಆರ್ಥಿಕ-ಸಾಂಸ್ಕೃತಿಕ ಜವಾಬ್ದಾರಿ. ಇಲ್ಲಿ ನೀಡುವವರು ಪಡೆಯುವವರು ಎಂಬ ಭಿನ್ನತೆಯನ್ನು ನಾವು ತೊಡೆದು ಹಾಕಬೇಕಾಗಿದೆ. ಎಲ್ಲಿಯವರೆಗೆ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯು ಆಡಳಿತಾತ್ಮಕವಾಗಿರುತ್ತದೊ, ಪರಿಹಾರ ಒದಗಿಸುವ ಕಾರ್ಯಕ್ರಮವಾಗಿರುತ್ತದೊ, ಔದಾರ್ಯದ ಕಾರ್ಯಕ್ರಮವಾಗಿರುತ್ತದೊ ಮತ್ತು ಮೇಲಿನಿಂದ ನೀಡುವ ಕಾರ್ಯಕ್ರಮವಾಗಿರುತ್ತದೊ ಅಲ್ಲಿಯವರೆಗೆ ಇದು ಯಶಸ್ವಿಯಾಗುವುದು ಸಾಧ್ಯವಿಲ್ಲ.

### ೪.೧.೩ ಕಾಲ ವಿಳಂಬ

ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯು ಈ ಮೊದಲೇ ತಿಳಿಸಿರುವಂತೆ ಬ್ಯಾಂಕು ಸಾಲ ಸಹಿತ ಉದ್ಯೋಗ ಸಾಂದ್ರ ಅನುದಾನ ಸಹಿತ ಕಾರ್ಯಕ್ರಮವಾಗಿದೆ. ಈ ಯೋಜನೆಯಡಿಯಲ್ಲಿ ಆಯ್ಕೆಯಾದ ಫಲಾನುಭವಿಗಳಿಗೆ ಯೋಜನೆ ಬಾಬ್ತುಸಾಲವು ಬ್ಯಾಂಕ್ ನಿಂದ ಮಂಜೂರಾಗಬೇಕು. ಇದಕ್ಕೆ ಎಷ್ಟು ಕಾಲಬೇಕು? ನಮ್ಮ ಅಧ್ಯಯನದಲ್ಲಿನ ೫೨ ಫಲಾನುಭವಿಗಳಲ್ಲಿ ಶೇ ೪೦ ರಷ್ಟು (೨೨) ಫಲಾನುಭವಿಗಳಿಗೆ ಬ್ಯಾಂಕ್ ನಿಂದ ಸಾಲ ದೊರೆಯಲು ೨೫೦ಕ್ಕೂ ಹೆಚ್ಚುದಿನವಾಗಿದೆ. ಈ ಅವಧಿಯಲ್ಲಿ ಫಲಾನುಭವಿ

ಬ್ಯಾಂಕಿಗೆ ಅನೇಕ ಬಾರಿ ಎಡತಾಕಿರುತ್ತಾನೆ. ಯೋಜನೆಯಡಿಯಲ್ಲಿನ ಚಟುವಟಿಕೆ ಬಾಬ್ತು ಇತರ ಸಿದ್ಧತೆ ಮಾಡಿಕೊಂಡಿರುತ್ತಾನೆ. ಸಾಲವನ್ನು ನೀಡುವಲ್ಲಿ ಬ್ಯಾಂಕುಗಳು ವಿಳಂಬ ಮಾಡುವುದರಿಂದ ಫಲಾನುಭವಿಗೆ ಉಂಟಾಗುವ ಖರ್ಚು ಅಧಿಕವಾಗುತ್ತದೆ.

ಸಾಲ ಕೈಗೆ ದೊರೆತ ಮೇಲೆ ಅದನ್ನು ಬಾಳಿಕೆ ಬರುವ-ವರಮಾನ ಹಡೆಯುವ ಬಂಡವಾಳ ಸರಕುಗಳನ್ನು ಕೊಳ್ಳಲು ಬಳಸಬೇಕು. ಹಣವಿದ್ದಾಗ ಸರಕುಗಳಿರುವುದಿಲ್ಲ. ಸರಕುಗಳಿದ್ದಾಗ ಹಣವಿರುವುದಿಲ್ಲ. ಇದು ನಿಜವಾದ ಪರಿಸ್ಥಿತಿಯಾಗಿದೆ. ನಮ್ಮ ಅಧ್ಯಯನದಲ್ಲಿ ೮ ಫಲಾನುಭವಿಗಳು (ಶೇ ೧೫) ಸಾಲದ ಮೊಬಲಗನ್ನು ಯೋಜನೆಯ ಉದ್ದೇಶಕ್ಕೆ ಹೊರತಾದ ಚಟುವಟಿಕೆಗಳಿಗೆ ಬಳಸಿದ್ದಾರೆ. ಆಸ್ತಿಯ ಮೇಲೆ ಸಾಲದ ಮೊತ್ತವನ್ನು ವಿನಿಯೋಗಿಸಿದ ಫಲಾನುಭವಿಗಳಿಗೆ ಆಸ್ತಿಯಿಂದ ಸಾಕಷ್ಟು ವರಮಾನ ಬರುತ್ತಿದೆ ಎಂದು ಹೇಳಲು ಸಾಧ್ಯವಿಲ್ಲ. ಹೀಗೆ ಫಲಾನುಭವಿಗಳ ಆಯ್ಕೆ, ಆಯ್ಕೆಯಾದ ಮೇಲೆ ಬ್ಯಾಂಕುಗಳಿಂದ ಸಾಲದ ಮೊಬಲಿಗಿನ ನೀಡಿಕೆ, ನೀಡಿದ ಸಾಲ ಮೊಬಲಗಿನಿಂದ ಬಾಳಿಕೆ ಬರುವ ಬಂಡವಾಳ ಸರಕುಗಳ ಖರೀದಿ-ಮುಂತಾದ ಪ್ರಕ್ರಿಯೆಯಲ್ಲಿ ಸಾಕಷ್ಟು ಕಾಲವಿಳಂಬ ಉಂಟಾಗುತ್ತಿದೆ.

### ೪.೧.೪.ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯಲ್ಲಿ ಮೀಸಲಾತಿ

ಈ ಪ್ರೌಢ ಪ್ರಬಂಧದ ಮೊದಲನೆಯ ಅಧ್ಯಾಯದಲ್ಲಿ ತಿಳಿಸಿರುವಂತೆ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯ ನಿಬಂಧನೆಯೇನೆಂದರೆ ಈ ಯೋಜನೆಯಡಿಯಲ್ಲಿ ಫಲಾನುಭವಿಗಳನ್ನು ಆಯ್ಕೆಮಾಡುವಾಗ ಪ್ರತಿಶತ ಮೂವತ್ತರಷ್ಟು ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡದವರು ಇರಬೇಕು. ಇದೇ ರೀತಿ ಆಯ್ಕೆಯಾದ ಫಲಾನುಭವಿಗಳಲ್ಲಿ ಶೇ ೪೦ ರಷ್ಟು ಮಹಿಳೆಯರಿರಬೇಕು. ಇದು ನಿಬಂಧನೆ.

೧೯೫೫-೯೬ರ ಸಾಲಿನಲ್ಲಿ ಹಗರಿಬೊಮ್ಮನಹಳ್ಳಿಯಲ್ಲಿ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯ ಆಶ್ರಯದಲ್ಲಿ ಸೌಲಭ್ಯ ಪಡೆದ ಫಲಾನುಭವಿಗಳ ಸಂಖ್ಯೆ ೬೦೦. ಇವರಲ್ಲಿ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡಕ್ಕೆ ಸೇರಿದವರ ಪ್ರಮಾಣ ಶೇ ೩೪.೭೭. ಅಂದರೆ ಯೋಜನೆಯ ನಿಬಂಧನೆಯಲ್ಲಿ ನಿಗದಿ ಪಡಿಸಿದ ಪ್ರಮಾಣಕ್ಕಿಂತ (ಶೇ ೩೦) ಅಧಿಕವಾಗಿ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡದವರು ಯೋಜನೆಯ ಸೌಲಭ್ಯ ಪಡೆಯುತ್ತಿದ್ದಾರೆ. ಇದೊಂದು ಶ್ಲಾಘನೀಯ ಸಂಗತಿಯಾಗಿದೆ.

ಆದರೆ ಇದೇ ರೀತಿಯ ನಿಬಂಧನೆಯ ಪಾಲನೆ ಮಹಿಳೆಯರಿಗೆ ಸಂಬಂಧಿಸಿದಂತೆ ಕಾಣುವುದಿಲ್ಲ. ೧೯೫೫-೯೬ರಲ್ಲಿ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯಡಿಯಲ್ಲಿ ಆಯ್ಕೆಯಾದ ಒಟ್ಟು ಫಲಾನುಭವಿಗಳಲ್ಲಿ

ಮಹಿಳೆಯರ ಪ್ರಮಾಣ ಶೇ ೩೧.೭೮ (೧೯೧). ಯೋಜನೆಯ ಮೂಲದಲ್ಲಿರುವ ನಿಬಂಧನೆಯೆಂದರೆ ಶೇ ೪೦. ನಿಬಂಧನೆಯಲ್ಲಿ ನಿಗಡಿ ಪಡಿಸಿರುವುದಕ್ಕಿಂತ ವಾಸ್ತವವಾಗಿ ಆಯ್ಕೆಯಾದ ಮಹಿಳಾ ಫಲಾನುಭವಿಗಳ ಸಂಖ್ಯೆ ಕಡಿಮೆ ಇದೆ.

ಇದರಿಂದ ತಿಳಿದು ಬರುವ ಸಂಗತಿಯೇನೆಂದರೆ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಗೆ ಸಂಬಂಧಿಸಿದ ನಿಬಂಧನೆಗಳನ್ನು ಚಾಚು ತಪ್ಪದೆ ಪಾಲಿಸಬೇಕು ಎಂಬ ಸಂಗತಿ ಕಂಡು ಬರುತ್ತಿಲ್ಲ. ಕೆಲವನ್ನು ಅನುಸರಿಸಲಾಗುತ್ತದೆ ಮತ್ತೆ ಕೆಲವನ್ನು ಉಲ್ಲಂಘಿಸಲಾಗುತ್ತಿದೆ. ಅನೇಕ ಸಂದರ್ಭಗಳಲ್ಲಿ ನಿಬಂಧನೆಗಳನ್ನು ಯಾಂತ್ರಿಕವಾಗಿ ಪಾಲಿಸಲಾಗುತ್ತದೆ. ಇದಕ್ಕೆಲ್ಲಾ ಕಾರಣವೇನೆಂದರೆ ಈ ಕಾರ್ಯಕ್ರಮವು ಆಡಳಿತಾತ್ಮಕ, ಮೇಲಿನಿಂದ ಹೇರಲ್ಪಟ್ಟ ಕಾರ್ಯಕ್ರಮವಾಗಿರುವುದರಲ್ಲಿದೆ.

**೪.೧.೫ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯಲ್ಲಿ ಬ್ಯಾಂಕುಗಳ ಪಾತ್ರ**

ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯ ಅನುಷ್ಠಾನ ಪ್ರಕ್ರಿಯೆಯಲ್ಲಿ ಬ್ಯಾಕುಗಳ ಪಾತ್ರ ತುಂಬಾ ಆಯಕಟ್ಟಿನದಾಗಿದೆ. ಏಕೆಂದರೆ ಯೋಜನೆಯಡಿಯಲ್ಲಿ ಆಯ್ಕೆಯಾದ ಫಲಾನುಭವಿಗಳಿಗೆ ಸಾಲ ನೀಡುವ ಜವಾಬ್ದಾರಿ ಬ್ಯಾಂಕುಗಳಿಗಿದೆ. ಸಾಲ ನೀಡಿದ ಮೇಲೆ ಫಲಾನುಭವಿಗಳು ಯೋಜನೆಯಡಿಯಲ್ಲಿ ಕೈಗೊಂಡ ಚಟುವಟಿಕೆಗಳನ್ನು ಯಶಸ್ವಿಯಾಗಿ ನಡೆಸುತ್ತಿದ್ದಾರಾ ಹೇಗೆ ಎಂಬುದನ್ನು ಬ್ಯಾಂಕುಗಳು ನಿಗಾ ವಹಿಸಬೇಕಾಗುತ್ತದೆ. ಕೈಗೊಂಡ ಯೋಜನೆಯ ನಿರ್ವಹಣೆಯಲ್ಲಿ ಫಲಾನುಭವಿಗಳು ಯಾವ ಸಮಸ್ಯೆ ಎದುರಿಸುತ್ತಿದ್ದಾರೆ ಎಂಬುದನ್ನು ಬ್ಯಾಂಕುಗಳು ತಿಳಿದುಕೊಳ್ಳಬೇಕು. ಯೋಜನೆಯ ಅವಧಿ ಮುಗಿದ ಮೇಲೆ ಸಾಲದ ಮೊಬಲಗಿನ ಮರು ವಸೂಲಾತಿ ಬಗ್ಗೆ ಕ್ರಮ ತೆಗೆದುಕೊಳ್ಳಬೇಕು.

ಹೀಗೆ ಬ್ಯಾಂಕುಗಳ ಪಾತ್ರ ತುಂಬಾ ಪ್ರಧಾನವಾದುದು ಹಾಗೂ ಗುರುತರವಾದುದು. ನಮ್ಮ ಅಧ್ಯಯನದಲ್ಲಿ ಕಂಡು ಬಂದ ತಥ್ಯವೆಂದರೆ ಬ್ಯಾಂಕುಗಳು ಫಲಾನುಭವಿಗಳ ಜೊತೆ ಕೇವಲ ಎರಡು ಹಂತದ ಸಂಬಂಧವಿಟ್ಟುಕೊಂಡಿವೆ.

೧.ಆಯ್ಕೆಯಾದ ಫಲಾನುಭವಿಗಳಿಗೆ ಸಾಲದ ಮೊಬಲಗನ್ನು ನೀಡುವುದು.
೨.ಸಾಲ ಪಡೆದ ಫಲಾನುಭವಿಗಳಿಂದ ಅವಧಿ ಮುಗಿದ ಮೇಲೆ ಸಾಲದ ಮೊತ್ತವನ್ನು ವಸೂಲು ಮಾಡುವುದು

ಇವೆರಡೂ ಕಾಲ ಘಟ್ಟಗಳ ನಡುವಿನ ಬಹು ಮುಖ್ಯ ಅವಧಿಯಲ್ಲಿ ಬ್ಯಾಂಕುಗಳ ಕ್ಷೇತ್ರಾಧಿಕಾರಿಗಳ ಮತ್ತು ಫಲಾನುಭವಿಗಳ ನಡುವೆ ಯಾವುದೇ ಸಂಬಂಧವಿರುವುದಿಲ್ಲ. ಫಲಾನುಭವಿಗಳಿಗೆ ಸೂಕ್ತ ಮಾರ್ಗದರ್ಶನ ದೊರೆಯುತ್ತಿಲ್ಲ.

ನಮ್ಮ ಅಧ್ಯಯನದಲ್ಲಿ ಫಲಾನುಭವಿಗಳ ಹಾಗೂ ಬ್ಯಾಂಕುಗಳ ನಡುವಿನ ವ್ಯವಹಾರಿಕ ಸಂಬಂಧವನ್ನು ಪರಿಶೀಲಿಸಲು ಪ್ರಯತ್ನಿಸಲಾಗಿದೆ. ಇಲ್ಲಿ ಕಂಡು ಬಂದ ಸಂಗತಿಯೆಂದರೆ ಒಟ್ಟು ಫಲಾನುಭವಿಗಳಲ್ಲಿ ಶೇ ೮೨ರಷ್ಟು ಫಲಾನುಭವಿಗಳು ಬ್ಯಾಂಕುಗಳ ಜೊತೆ ನೇರವಾಗಿ ವ್ಯವಹಾರ ಸಂಬಂಧವಿಟ್ಟುಕೊಂಡಿರುವುದು ಕಂಡುಬಂದಿದೆ. ಆದರೆ ಶೇ ೧೭ ರಷ್ಟು ಫಲಾನುಭವಿಗಳು ಮಧ್ಯವರ್ತಿಗಳ ಮೂಲಕ ಬ್ಯಾಂಕುಗಳೊಂದಿಗೆ ವ್ಯವಹಾರ ನಡೆಸುತ್ತಿರುವುದು ತಿಳಿದು ಬಂದಿದೆ. ಮಧ್ಯವರ್ತಿಗಳ ಮೂಲಕ ವ್ಯವಹಾರ ನಡೆಸಿದಾಗ ಅನೇಕ ಬಗೆಯ ವಿಕೃತಿಗಳು ಇಲ್ಲಿ ಪ್ರವೇಶಿಸುವ ಅಪಾಯವಿರುತ್ತದೆ.(ನೋಡಿ: ಕೋಷ್ಟಕ ೩.೪).

**೪.೧.೬.ಫಲಾನುಭವಿಗಳಿಗೆ ತರಬೇತಿ.**

ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯಡಿಯಲ್ಲಿ ಆಯ್ಕೆಯಾದ ಫಲಾನುಭವಿಗಳು ಸ್ವಸಾಮರ್ಥ್ಯದ ಮೇಲೆ ಯೋಜನೆಗೆ ಸಂಬಂಧಿಸಿದ ಚಟುವಟಿಕೆಯನ್ನು ಕೈಗೊಳ್ಳುತ್ತಾರೆ ಎಂಬ ನಂಬಿಕೆ ಇಲ್ಲಿ ಕೆಲಸ ಮಾಡುತ್ತಿದೆ. ಆದರೆ ಇಂಥಹ ನಂಬಿಕೆಗೆ ಸೂಕ್ತ ಆಧಾರವನ್ನು ನೀಡುವುದು ಸಾಧ್ಯವಿಲ್ಲ. ಫಲಾನುಭವಿಗಳು ಆಯ್ಕೆ ಮಾಡಿದ ಚಟುವಟಿಕೆಗಳಿಗೆ ಸಂಬಂಧಿಸಿದ ಕಚ್ಚಾ ವಸ್ತುಗಳ ಖರೀದಿ, ಉತ್ಪಾದನೆ, ಉತ್ಪನ್ನಗಳ ಮಾರಾಟ-ಇವುಗಳಿಗೆ ಸಂಬಂಧಿಸಿದ ನಿರ್ವಹಣಾ ತಿಳುವಳಿಕೆ ಇರುವುದಿಲ್ಲ. ಈ ವಿಷಯಗಳಿಗೆ ಸಂಬಂಧಿಸಿದಂತೆ ಫಲಾನುಭವಿಗಳಿಗೆ ತಿಳುವಳಿಕೆ-ತರಬೇತಿ ನೀಡುವುದು ಅವಶ್ಯಕ. ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯಡಿಯಲ್ಲಿ 'ತರಬೇತಿ'ಗೆ ಯಾವುದೇ ಅವಕಾಶವಿಲ್ಲ.ಫಲಾನುಭವಿಗಳಿಗೆ ಸಾಲದ ಮೊತ್ತ ನೀಡಿಬಿಟ್ಟರೆ ಸರ್ಕಾರಿ ಅಧಿಕಾರಿಗಳು, ಬ್ಯಾಂಕುಗಳ ಜವಾಬ್ದಾರಿ ಮುಗಿಯಿತು ಎಂಬಭಾವನೆ ವ್ಯಾಪಕವಾಗಿದೆ. ಸಂಘಟನಾತ್ಮಕ ಸ್ವರೂಪ ಈ ಕಾರ್ಯಕ್ರಮಕ್ಕೆ ಇಲ್ಲದಿರುವುದೇ ಇಂಥಹ ಭಾವನೆಗೆ ಕಾರಣವಾಗಿದೆ.

**ಭಾಗ-೨**

**೪.೨.೦ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯ ಪರಿಣಾಮಗಳ ಅಧ್ಯಯನ**

ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯಡಿಯಲ್ಲಿ ಚಟುವಟಿಕೆ ಕೈಗೊಂಡ ಫಲಾನುಭವಿಗಳ ವರಮಾನ ಯಾವ ರೀತಿ ಬದಲಾವಣೆಯಾಗಿದೆ, ಸಾಲ ಮರುಪಾವತಿ ಸ್ವರೂಪ ಯಾವ ಬಗೆಯದಾಗಿದೆ, ಇಲ್ಲಿ ಫಲಾನುಭವಿಗಳು ಎದುರಿಸುವ ಸಮಸ್ಯೆಗಳಾವುವು ಎಂಬುದನ್ನು ಮೂರನೆಯ ಅಧ್ಯಾಯದ ೨ನೇ ಭಾಗದಲ್ಲಿ ವಿಶ್ಲೇಷಿಸಿದ್ದೇವೆ. ಪ್ರಸ್ತುತ ಭಾಗದಲ್ಲಿ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯಿಂದ ಉಂಟಾದ ಪರಿಣಾಮಗಳ ಗತಿಶೀಲತೆಯನ್ನು ಚರ್ಚಿಸಲಾಗಿದೆ.

### ೪.೨.೧. ಏಕರೂಪಿ ಆರ್ಥಿಕ ರಚನೆ

ನಮ್ಮ ಸಮಾಜದ ಸಂದರ್ಭದಲ್ಲಿ ಗ್ರಾಮಗಳು ಏಕರೂಪಿ ಆರ್ಥಿಕ ರಚನೆಗಳಾಗಿರುವುದು ಕಂಡು ಬಂದಿದೆ. ಏಕರೂಪಿ ಆರ್ಥಿಕ ರಚನೆಯೆಂದರೆ ಗ್ರಾಮಗಳ ಆರ್ಥಿಕ ಚಟುವಟಿಕೆಗಳು ಏಕರೂಪ ಪಡೆದಿರುತ್ತವೆ. ಉದಾಹರಣೆಗೆ ಗ್ರಾಮಗಳಲ್ಲಿ ಜನರ ಪ್ರಧಾನ ಕಸುಬು ಕೃಷಿ ಹಾಗೂ ಕೃಷಿ ಸಂಬಂಧಿ ಚಟುವಟಿಕೆಗಳಾಗಿರುತ್ತವೆ. ಹೀಗೆ ಏಕವೃತ್ತಿ ಪ್ರಧಾನವಾಗಿರುವ, ಏಕ ಮೂಲದಿಂದ ವರಮಾನ ಸೃಷ್ಟಿಯಾಗುತ್ತಿರುವ ವ್ಯವಸ್ಥೆಯನ್ನು ಏಕರೂಪಿ ಆರ್ಥಿಕ ರಚನೆ ಎಂದು ಕರೆಯಬಹುದು. ಭಾರತೀಯ ಗ್ರಾಮೀಣ ಪ್ರದೇಶವನ್ನು 'ಏಕರೂಪಿ ಆರ್ಥಿಕ ರಚನೆ' ಗಳಾಗಿ ಪರಿಭಾವಿಸುವುದು ವಾಡಿಕೆಯಲ್ಲಿದೆ.

ಈ ಬಗೆಯ ಏಕರೂಪಿ ಆರ್ಥಿಕ ರಚನೆಯನ್ನು ಬದಲಾಯಿಸುವ, ಅದನ್ನು ಬಹುರೂಪಿಯನ್ನಾಗಿ ಮಾಡುವ ಪ್ರಕ್ರಿಯೆಯನ್ನೇ ಅಭಿವೃದ್ಧಿಯೆಂದು ಪರಿಭಾವಿಸಲಾಗಿದೆ.ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯು ಈ ಬಗೆಯ ಪರಿವರ್ತನೆಯನ್ನು ತರಬೇಕು ಎಂಬ ನಿರೀಕ್ಷೆಯಿದೆ. ಗ್ರಾಮೀಣ ಪ್ರದೇಶಗಳಲ್ಲಿ ಕೃಷಿಯೇತರ ಚಟುವಟಿಕೆಗಳನ್ನು ಪ್ರೋತ್ಸಾಹಿಸುವ ಮೂಲಕ ಮೊದಲನೆಯದಾಗಿ ಗ್ರಾಮಗಳನ್ನು ಬಹುರೂಪಿ ಆರ್ಥಿಕ ರಚನೆಗಳನ್ನಾಗಿ ಪರಿವರ್ತಿಸಬಹುದು. ಎರಡನೆಯದಾಗಿ ಗ್ರಾಮೀಣ ಪ್ರದೇಶದಿಂದ ಶ್ರಮಶಕ್ತಿ ನಗರ ಪ್ರದೇಶಕ್ಕೆ ವಲಸೆ ಹೋಗುವುದನ್ನುತಡೆಯಬಹುದು.(ರಾವ್ .ವಿ.ಎಮ್ ೧೯೮೬).

ನಮ್ಮ ಅಧ್ಯಯನದಿಂದ ಕಂಡುಕೊಂಡ ತಥ್ಯವೆಂದರೆ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯು ಗ್ರಾಮೀಣ ಪ್ರದೇಶವನ್ನು ಏಕರೂಪ ರಚನೆಯಿಂದ ಬಹುರೂಪಿ ರಚನೆಗಳಾಗಿ ಪರಿವರ್ತಿಸುವಲ್ಲಿ ವಿಫಲವಾಗಿದೆ. ನಮ್ಮ ಅಧ್ಯಯನ ಕ್ಷೇತ್ರವಾದ ಹಗರಿಬೊಮ್ಮನಹಳ್ಳಿ ತಾಲ್ಲೂಕು ಇಡಿಯಾಗಿ ಗ್ರಾಮೀಣ ಪ್ರದೇಶವಾಗಿದೆ.ಈ ತಾಲ್ಲೂಕಿನ ಒಟ್ಟು ಶ್ರಮಶಕ್ತಿ ೬೦,೭೮೧. ಒಟ್ಟು ಜನಸಂಖ್ಯೆಯಲ್ಲಿ ಇವರ ಪ್ರಮಾಣ ಶೇ ೪೫.೦೧) (ನೋಡಿ:ಕೋಷ್ಟಕ.೨.೨).

ಒಟ್ಟು ಶ್ರಮಶಕ್ತಿಯಲ್ಲಿ ಕೃಷಿಯನ್ನು ಅವಲಂಬಿಸಿಕೊಂಡಿರುವವರ ಪ್ರಮಾಣ ಶೇ ೮೫(೫೧,೬೭೪). ಕೃಷಿಯನ್ನು ಅವಲಂಬಿಸಿರುವ ೫೧,೬೭೪ ಶ್ರಮಿಕರಲ್ಲಿ ೨೪,೭೯೭ (ಶೇ ೪೦.೨೯) ರಷ್ಟು ಸಾಗುವಳಿದಾರರಾಗಿದ್ದಾರೆ. ಉಳಿದ೨೬,೮೭೭ ಭೂ ರಹಿತ ಕೃಷಿಕಾರ್ಮಿಕರಾಗಿದ್ದಾರೆ (ಶೇ೪೪.೨೦). ಕೃಷಿಯೇತರ ಚಟುವಟಕೆಗಳಲ್ಲಿ ನಿರತರಾದವರ ಪ್ರಮಾಣ ಕೇವಲ ಶೇ ೧೫(೯೧೦೭).

ನಮ್ಮ ಅಧ್ಯಯನದ ನಮೂನೆಯಲ್ಲಿನ ಒಟ್ಟು ಫಲಾನುಭವಿಗಳಲ್ಲಿ (೫೨) ಶೇ೧೯.೨೨ ರಷ್ಟು ವ್ಯವಸಾಯಗಾರರಾಗಿದ್ದಾರೆ. ಶೇ೨೮.೮೪ ರಷ್ಟು ವ್ಯಾಪಾರಿಗಳಾಗಿದ್ದಾರೆ. ಉಳಿದ ಶೇ ೪೦.೩೭ರಷ್ಟು ಫಲಾನುಭವಿಗಳು (೨೧)ಕೃಷಿಕೂಲಿ ಕಾರ್ಮಿಕರಾಗಿದ್ದಾರೆ. ಅಂದ ಮೇಲೆ ಕೃಷಿಯನ್ನು ಅವಲಂಬಿಸಿಕೊಂಡಿರುವ ಫಲಾನುಭವಿಗಳ ಒಟ್ಟು ಪ್ರಮಾಣ ಶೇ ೫೯.೫೯. ವ್ಯಾಪಾರ ಮತ್ತು ಇತರೆ ಚಟುವಟಿಕೆಗಳಲ್ಲಿ ನಿರತರಾದವರ ಪ್ರಮಾಣ ೪೦.೦೧.ಇದರಿಂದ ತಿಳಿದು ಬರುವ ಸಂಗತಿಯೆಂದರೆ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯು ಸಹ ಈಗಿರುವ ಗ್ರಾಮೀಣ ಉದ್ಯೋಗರಚನೆಯನ್ನು ಯಥಾಸ್ಥಿತಿಯಲ್ಲಿ ಮುಂದುವರಿಸುವ ದಿಶೆಯಲ್ಲಿ ಮಗ್ನರಾಗಿರುವಂತೆ ಭಾಸವಾಗುತ್ತದೆ. ಆದರೆವಾಸ್ತವವಾಗಿ ಈ ಯೋಜನೆಯು ಕೃಷಿಯೇತರ ಚಟುವಟಿಕೆಗಳ ಬೆಳವಣಿಗೆಗೆ ಆದ್ಯತೆ ನೀಡಬೇಕಾಗಿತ್ತು. ಪ್ರಜ್ಞಾಪೂರ್ವಕವಾಗಿ ಫಲಾನುಭವಿಗಳು ಕೃಷಿಯೇತರ ಚಟುವಟಿಕೆಗಳನ್ನು ಕೈಗೊಳ್ಳುವಂತೆ ನೋಡಿಕೊಳ್ಳಬೇಕಾಗಿತ್ತು. ಆದರೆ ಇದು ಸುಲಭದ ಕೆಲಸವಲ್ಲ. ಏಕೆಂದರೆ ಗ್ರಾಮೀಣವಾಸಿ ಜನರಿಗೆ ಕೃಷಿಯೇತರ ಚಟುವಟಿಕೆಗಳನ್ನು ಆಯ್ಕೆ ಮಾಡಿಕೊಳ್ಳಲು ಹಾಗೂ ನಿರ್ವಹಿಸಲು ತರಬೇತಿ ಅಗತ್ಯವಾಗುತ್ತದೆ. ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯಲ್ಲಿತರಬೇತಿಗೆ ಅವಕಾಶವಿಲ್ಲ. ಈ ಕಾರಣದಿಂದಾಗಿ 'ಏಕತರೂಪ ಶ್ರಮರಚನೆ' ಯಥಾಸ್ಥಿತಿಯಲ್ಲಿ ಮುಂದುವರಿದೆ.

೪.೨.೨. ಸಾಲದ ಮೊತ್ತ ಮತ್ತು ಪ್ರತಿಫಲ.

ಹಿಂದಿನ ಅಧ್ಯಾಯದ ಕೋಷ್ಟಕ ೩.೬ರಲ್ಲಿ ಫಲಾನುಭವಿಗಳಿಗೆ ದೊರೆತ ವಿವಿಧ ಸಾಲದ ಮೊತ್ತದ ವಿವರ ನೀಡಲಾಗಿದೆ.ಇಲ್ಲಿ ಸಾಲದ ಮೊತ್ತವನ್ನು ಮೂರು ಗುಂಪುಗಳಾಗಿ ವರ್ಗೀಕರಿಸಲಾಗಿದೆ. ೫೦೦೦ಕ್ಕಿಂತ ಕಡಿಮೆ ಸಾಲದ ಮೊತ್ತಮೊದಲನೆಯ ಗುಂಪು, ೫೦೦೧ರಿಂದ ೭೫೦೦ ಸಾಲದ ಮೊತ್ತ ಎರಡನೆಯ ಗುಂಪು ಮತ್ತು ೭೫೦೧ರಿಂದ ೧೦,೦೦೦ ಸಾಲದ ಮೊತ್ತ ಮೂರನೆಯ ಗುಂಪು. ಒಟ್ಟು ಫಲಾನುಭವಿಗಳಲ್ಲಿ ಶೇ ೬೧.೫೩ರಷ್ಟು ಮೊದಲನೆಯ ಸಾಲದ ಮೊತ್ತದ ಗುಂಪಿನಲ್ಲಿದ್ದಾರೆ. ಎರಡನೆಯ ಗುಂಪಿನಲ್ಲಿ ಶೇ ೩೪.೬೧ರಷ್ಟು ಫಲಾನುಭವಿಗಳಿದ್ದಾರೆ. ಮೂರನೇಗುಂಪಿನಲ್ಲಿರುವ ಫಲಾನುಭವಿಗಳ ಪ್ರಮಾಣ ಕೇವಲ ಶೇ ೩.೮೪(೨).ಅಧಿಕ ಅಧಿಕವಾಗಿ ೫೦೦೦ಕ್ಕಿಂತ ಕಡಿಮೆಮೊತ್ತದ ಸಾಲ ಸೌಲಭ್ಯ ಪಡೆದ ಫಲಾನುಭವಿಗಳ ಸಂಖ್ಯೆ ಹೆಚ್ಚಾಗಿದೆ.

ಇಲ್ಲಿ ಒಂದು ಸಣ್ಣ ಬಂಡವಾಳ ಹೂಡಿಕೆ ಹಾಗೂ ಪ್ರತಿಫಲದ ಒಂದು ಮಾದರಿಯನ್ನು ರೂಪಿಸಬಹುದು. ಬಂಡವಾಳ ಹೂಡಿಕೆ ೫೦೦೦ ರೂಪಾಯಿದ್ದರೆ ಅದರಿಂದ ಬರುವ ಪ್ರತಿಫಲ ಎಷ್ಟು? ಫಲಾನುಭವಿಗಳು ಕೈಗೊಂಡ ಚಟುವಟಿಕೆಯ ಅತ್ಯಂತ ಲಾಭದಾಯಕವೆಂದರೂ ಸಹ ಪ್ರತಿಫಲವು ಶೇ ೨೫ರಿಂದ ಶೇ೩೦ನ್ನು ಮೀರಲು ಸಾಧ್ಯವಿಲ್ಲ.೫೦೦೦ರೂಪಾಯಿ ಹೂಡಿಕೆಯ ಮೇಲೆ ಪ್ರತಿಫಲವು ಶೇ.೩೦ ಎಂದು ಭಾವಿಸಿದರೆ ಫಲಾನುಭವಿಯ ಮಾಸಿಕ ವರಮಾನ ೧೨೫ ರೂಪಾಯಿಗಳು. ವಾರ್ಷಿಕ ವರಮಾನವು ೧೫೦೦ರೂಪಾಯಿ.

ಅಂದ ಮೇಲೆ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯ ಆಶ್ರಯದಲ್ಲಿ ಪಡೆದ ಸಾಲದಿಂದ ಅತ್ಯಂತ ಹೆಚ್ಚು ಲಾಭದಾಯಕ ಚಟುವಟಿಕೆ ಕೈಗೊಂಡರೂ ಸಹ ಫಲಾನುಭವಿಗಳು ಬಡತನದ ರೇಖೆಗಿಂತ ಮೇಲೇರಲು ಸಾಧ್ಯವಾಗುವಷ್ಟು ವರಮಾನಗಳಿಸಲು ಸಾಧ್ಯವಿಲ್ಲ. ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯ ಉದ್ದೇಶ ಬಡತನದ ರೇಖೆಯ ಕೆಳಗಿರುವ ಫಲಾನುಭವಿಗಳನ್ನು ಬಡತನದ ರೇಖೆಯಮೇಲೆ ಒಯ್ಯುವುದಾಗಿದೆ. ಆದರೆ ವಾಸ್ತವಿಕವಾಗಿ ಈ ಯೋಜನೆಯಿಂದ ಇದು ಸಾಧ್ಯವಿಲ್ಲ.

ತಾತ್ವಿಕವಾಗಿ ಯೋಜನೆಯ ಅಂತರ್ಯದಲೇ ವಿಕೃತಿಗಳಿವೆ. ಈ ಯೋಜನೆಯ ಮೂಲ ಉದ್ದೇಶಕ್ಕೂ ಮತ್ತು ಅದು ಆಚರಣೆಗೆ ಬರುತ್ತಿರುವ ರೀತಿಗೂ ಯಾವುದೇ ತಾಳ ಮೇಳ ವಿಲ್ಲದಂತಾಗಿದೆ. ನಮ್ಮ ನಮೂನೆಯಲ್ಲಿ ೭೫೦೧ರಿಂದ ೧೦,೦೦೦ ರೂಪಾಯಿ ಮೊತ್ತದ ಸಾಲ ಸೌಲಭ್ಯ ಪಡೆದ ಭಾಗ್ಯಶಾಲಿಗಳ ಸಂಖ್ಯೆ ೨(ಶೇ೩.೮೪).೧೦,೦೦೦ರೂಪಾಯಿಸಾಲದ ಮೊತ್ತವಾದರೂ ಸಹ ಪ್ರತಿಫಲವು ಶೇ ೩೦ ಎಂದು ಭಾವಿಸಿದರೆ ಮಾಸಿಕ ವರಮಾನ ಕೇವಲ ೨೫೦ಮತ್ತು ವಾರ್ಷಿಕವರಮಾನ ೩೦೦೦ರೂಪಾಯಿ. ಈ ವರಮಾನವೂ ಸಹ ಫಲಾನುಭವಿಯನ್ನು ಬಡತನದ ರೇಖೆಯ ಮೇಲೆ ಒಯ್ಯಲು ಸಾಧ್ಯವಿಲ್ಲ (ಜೀನ್ ಡ್ರೀಜೆ.೧೯೯೦.ಪು:A-೯೬).

ನಾವು ಈ ಹಿಂದೆ ಹೇಳಿದಂತೆ ಈ ಕಾರ್ಯಕ್ರಮವು ಬಡವರ್ಗಕ್ಕೆ ಪರಿಹಾರ ಒದಗಿಸಬಲ್ಲುದೆ ವಿನಾ ಬಡತನವನ್ನುನಿವಾರಣೆಮಾಡುವುದು ಸಾಧ್ಯವಿಲ್ಲ. ಏಕೆಂದರೆ ಈ ಯೋಜನೆಯಡಿಯಲ್ಲಿ ಕೈಗೊಳ್ಳುವ ಚಟುವಟಿಕೆಗಳಿಂದ ಬಡತನದ ರೇಖೆಯಿಂದ ಮೇಲೆ ಜಿಗಿಯಲು ಅಗತ್ಯವಾದ ವರಮಾನ ಬರುವುದಿಲ್ಲ.

**೪.೨.೩ ಸಾಲ ಮರುಪಾವತಿ ಸ್ವರೂಪ:**

ಸಮಗ್ರ ಗ್ರಾಮೀಣ ಅಭಿವೃದ್ಧಿಯೋಜನೆ ಯಡಿಯಲ್ಲಿ ನೀಡುವ ಬ್ಯಾಂಕು ಸಾಲದ ಬಗ್ಗೆ ಜನರಲ್ಲಿ ವ್ಯಾಪಕವಾಗಿ ಹಬ್ಬಿರುವ ನಂಬಿಕೆಯೆಂದರೆ ಸದರಿ ಸಾಲವನ್ನು ವಾಪಸ್ಸು ನೀಡಬೇಕಾಗಿಲ್ಲ ಎಂಬುದಾಗಿದೆ. ಇದರಿಂದಾಗಿ ಬ್ಯಾಂಕು ಸಾಲದಮರುಪಾವತಿ ನಿರೀಕ್ಷಿಸಿದ ಮಟ್ಟದಲ್ಲಿ ನಡೆಯುತ್ತಿಲ್ಲ. ಫಲಾನುಭವಿಗಳಿಗಾಗಲಿ ಸರಕಾರಿ ಅಧಿಕಾರಶಾಹಿಗಳಿಗಾಗಲಿ ಅಥವಾ ಬ್ಯಾಂಕ್ ಅಧಿಕಾರಿಗಳಿಗಾಗಲಿ ಸಮಗ್ರ ಗ್ರಾಮೀಣ ಅಭಿವೃದ್ಧಿಯೋಜನೆ ಆಶ್ರಯದ ಸಾಲ ಮರುಪಾವತಿಯಾಗುತ್ತದೆಎಂಬುದರ ಬಗ್ಗೆ ವಿಶ್ವಾಸವಿಲ್ಲ. ನಮ್ಮ ಅಧ್ಯಯನದ ಒಟ್ಟು ಫಲಾನುಭವಿಗಳಲ್ಲಿ(೫೨) ಶೇ ೨೮.೮೪ ರಷ್ಟು ಫಲಾನುಭವಿಗಳು ಸಾಲಮನ್ನಾ ಆಗುತ್ತದೆ ಎಂಬ ನಿರೀಕ್ಷೆಯಲ್ಲಿರುವುದು ತಿಳಿದು ಬಂದಿದೆ.(ನೋಡಿ:ಕೋಷ್ಟಕ:೩.೭)

ಒಟ್ಟು ಫಲಾನುಭವಿಗಳಲ್ಲಿ ಸಾಲದ ಮೊತ್ತವನ್ನು ಪೂರ್ಣವಾಗಿ ಮರುಪಾವತಿ ಮಾಡಿದವರ ಪ್ರಮಾಣ ಕೇವಲ ಶೇ೯.೬೧.ನಮ್ಮ ನಮೂನೆಯಲ್ಲಿರುವ ೫೨ ಫಲಾನುಭವಿಗಳಲ್ಲಿ ಶೇ ೬೩.೪೬ರಷ್ಟು ಫಲಾನುಭವಿಗಳು ಸಾಲದ ಮರುಪಾವತಿ ಮಾಡಿಲ್ಲ. ೧೪ ಫಲಾನುಭವಿಗಳು ಅಲ್ಪಸ್ವಲ್ಪ ಸಾಲದ ಮೊತ್ತವನ್ನು ವಾಪಸ್ಸುಮಾಡಿದ್ದಾರೆ.

ಫಲಾನುಭವಿಗಳು ಬ್ಯಾಂಕಿನಿಂದ ತಂದ ಸಾಲವನ್ನು ವಾಪಸ್ಸು ಮಾಡದಿರಲು ಕೆಲವು ನಿಜಕಾರಣಗಳಿವೆ. ಒಟ್ಟುಫಲಾನುಭವಿಗಳಲ್ಲಿ ೧೨ ಫಲಾನುಭವಿಗಳಿಗೆ (ಶೇ ೨೩.೦೭) ಬ್ಯಾಂಕು ಸಾಲದ ಮೂಲಕ ಕೈಗೊಂಡ ಚಟುವಟಿಕೆಯಿಂದ ವರಮಾನವು ಬರುತ್ತಿಲ್ಲ. ಇನ್ನು ಶೇ ೨೦ರಷ್ಟು ಫಲಾನುಭವಿಗಳಿಗೆ ಕೆಲವು ತಾಂತ್ರಿಕ ಕಾರಣಗಳಿಂದಾಗಿ ಸಾಲ ಮರುಪಾವತಿ ಸಾಧ್ಯವಿಲ್ಲವಾಗಿದೆ.

ಒಟ್ಟಾರೆ ಫಲಾನುಭವಿಗಳಲ್ಲಿ ಶೇ ೨೮ರಷ್ಟು ಮಂದಿ ಸಾಲ ಮರುಪಾವತಿ ಬಗ್ಗೆ ಯೋಚಿಸಿಲ್ಲ. ಸಾಲಮನ್ನಾ ಆಗುತ್ತದೆ ಎಂಬ ನಿರೀಕ್ಷೆಯಲ್ಲಿದ್ದಾರೆ. ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯ ಸಾಲ ಸೌಲಭ್ಯವೆಂದರೆ ಮರುಪಾವತಿ ಮಾಡಬೇಕಾಗಿಲ್ಲ ಎಂಬ ತಪು ್ಪ ನಂಬಿಕೆಯು ವ್ಯಾಪಕವಾಗಿ ಹರಡಿ ಬಿಟ್ಟಿದೆ.

**೪.೨.೪: ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆ - ಲಿಂಗ ತಾರತಮ್ಯ:**

ಅಭಿವೃದ್ಧಿಯ ಫಲಗಳು ಸಮಾಜದಲ್ಲಿ ಹಾಗೂ ಕುಟುಂಬಗಳಲ್ಲಿ ಲಿಂಗ ಬೇಧವೆಣಿಸದೆ ಎಲ್ಲರಿಗೂ ಸಮಾನವಾಗಿ ದೊರೆಯುತ್ತಿವೆ ಎಂದು ಹೇಳಲಾಗುತ್ತಿದೆ. ಆದರೆ ವಾಸ್ತವವಾಗಿ ಪರಿಸ್ಥಿತಿ ಹೀಗಿಲ್ಲ. ಅಭಿವೃದ್ಧಿಯನ್ನು ಲಿಂಗ ನಿರಪೇಕ್ಷ ನೆಲೆಯಲ್ಲಿ ಪರಿಭಾವಿಸುವುದು ಸರಿಯೆಂದು ಕಾಣವುದಿಲ್ಲ. ಅಭಿವೃದ್ಧಿ ಯೋಜನೆಗಳ ಫಲಗಳು ಅಧಿಕಾಧಿಕವಾಗಿ ಪುರುಷವರ್ಗಕ್ಕೆ ದೊರೆಯುವ ಪರಿಸ್ಥಿತಿ ನಮ್ಮ ಮುಂದಿದೆ.

ಈ ಅಧ್ಯಯನದ ನಮೂನೆಯಲ್ಲಿನ ೫೨ ಫಲಾನುಭವಿಗಳಲ್ಲಿ ಪುರುಷರು ೩೩(ಶೇ೬೩.೪೬) ಮತ್ತು ಮಹಿಳೆಯರು೧೯(ಶೇ೩೬.೫೪). ಪುರುಷ ಫಲಾನುಭವಿಗಳಿಗಿಂತ ಮಹಿಳೆಯರ ಸ್ಥಿತಿಗತಿ ದುರ್ಬಲವಾಗಿರುವುದು ಕಂಡುಬಂದಿದೆ.ಒಟ್ಟು ಪುರುಷ ಫಲಾನುಭವಿಗಳಲ್ಲಿ ಅಕ್ಷರಸ್ಥರ ಪ್ರಮಾಣ ಶೇ ೫೭.೫೭. ಆದರೆ ಮಹಿಳಾ ಫಲಾನುಭವಿಗಳಲ್ಲಿ ಅಕ್ಷರಸ್ಥರ ಪ್ರಮಾಣ ಕೇವಲ ಶೇ ೨೧.೫೨. ಅನಕ್ಷರಸ್ಥರ ಪ್ರಮಾಣ ಪುರುಷರಿಗಿಂತ ಮಹಿಳೆಯರಲ್ಲಿ ಅಧಿಕವಿದೆ.

ಸ್ತ್ರೀ-ಪುರುಷರ ನಡುವಿನ ವೃತ್ತಿ ಸ್ವರೂಪ ನೋಡಿದಾಗಲೂ ಲಿಂಗತಾರತಮ್ಯ ಸೂಕ್ಷ್ಮವಾಗಿ ಕೆಲಸ ಮಾಡುತ್ತಿರುವುದನ್ನು ನೋಡಬಹುದು. ಪುರುಷ ಫಲಾನುಭವಿಗಳಲ್ಲಿ ಶೇ ೩೩.೩೩ರಷ್ಟು ವ್ಯಾಪಾರವನ್ನು

ಅವಲಂಬಿಸಿದ್ದಾರೆ. ವ್ಯವಸಾಯವನ್ನು ಅಬಲಂಬಿಸಿಕೊಂಡಿರುವ ಪುರುಷರ ಪ್ರಮಾಣ ಶೇ೨೪.೨೪. ಪುರುಷ ಫಲಾನುಭವಿಗಳಲ್ಲಿ ಕೂಲಿಕಾರರಪ್ರಮಾಣ ಶೇ ೨೭.೩೦.

ಆದರೆ ಮಹಿಳಾ ವರ್ಗದಲ್ಲಿ ಅತಿ ಹೆಚ್ಚು ಫಲಾನುಭವಿಗಳು ಅಂದರೆ ಶೇ ೬೩.೧೫ರಷ್ಟು ಕೂಲಿಕಾರರಿದ್ದಾರೆ. ಸಾಕ್ಷರತೆಹಾಗೂ ಉದ್ಯೋಗ ರಚನೆ ದೃಷ್ಟಿಯಿಂದ ಮಹಿಳೆಯರ ಸ್ಥಾನ-ಮಾನ ಹಾಗೂ ಸ್ಥಿತಿ-ಗತಿ ಪುರುಷವರ್ಗಕ್ಕಿಂತ ಕೆಳಮಟ್ಟದಲ್ಲಿದೆ. (ವಿವರಗಳಿಗೆ ನೋಡಿ:ಕೋಷ್ಟಕ ೨.೪ ಮತ್ತು ೨.೫).

**೪.೨.೫ ನಿಕೃಷ್ಟ ಸಾಲದ ಮೊತ್ತ:**

ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯ ಆಶ್ರಯದಲ್ಲಿ, ಫಲಾನುಭವಿಗಳಿಗೆ ಬ್ಯಾಂಕು ಸಾಲದ ಸಹಾಯ ದೊರೆಯುತ್ತದೆ. ಇಲ್ಲಿ ಚಟುವಟಿಕೆಗಳನ್ನು ಆಧರಿಸಿ ಸಾಲದ ಮೊತ್ತ ನಿರ್ಧರಿಸಲಾಗುತ್ತದೆ. ಆದರೆ ಸರ್ವೆಸಾಮಾನ್ಯವಾಗಿಮಹಿಳೆಯರಿಗೆ ನೀಡುವ ಸಾಲದ ಮೊತ್ತ, ಪುರುಷರಿಗೆ ನೀಡುವ ಸಾಲದ ಮೊತ್ತಿಕ್ಕಿಂತ ಕಡಿಮೆ ಇರುತ್ತದೆ. ಹಿಂದಿನಅಧ್ಯಾಯದ ಕೋಷ್ಟಕ ೩.೬ರಲ್ಲಿ ತೋರಿಸಿರುವಂತೆ ಸಾಲದ ಮೊತ್ತವನ್ನು ಮೂರು ಗುಂಪುಗಳಾಗಿ ವಿಂಗಡಿಸಲಾಗಿದೆ.

ಮಹಿಳಾ ಫಲಾನುಭವಿಗಳಲ್ಲಿ ಶೇ ೬೮.೪೩ರಷ್ಟು ಮಹಿಳೆಯರಿಗೆ ೫೦೦೦ರೂಪಾಯಿಗಿಂತ ಕಡಿಮೆ ಮೊತ್ತದಸಾಲ ಸೌಲಭ್ಯ ದೊರೆತಿದೆ. ೫೦೦೦ಕ್ಕಿಂತ ಹೆಚ್ಚಿನ ಮೊತ್ತದ ಸಾಲಸೌಲಭ್ಯ ಪಡೆದ ಮಹಿಳಾ ಫಲಾನುಭವಿಗಳ ಪ್ರಮಾಣಶೇ೩೧.೫೭. ಆದರೆ ಪುರುಷ ಫಲಾನುಭವಿಗಳಲ್ಲಿ ಶೇ ೪೨.೪೨ರಷ್ಟು ಫಲಾನುಭವಿಗಳಿಗೆ ೫೦೦೦ಕ್ಕಿಂತ ಮೇಲ್ಪಟ್ಟುಮೊತ್ತದ ಸಾಲ ಸೌಲಭ್ಯ ದೊರೆತಿದೆ.

ಹೀಗೆ ಸಮಾಜದಲ್ಲಿ ಈಗಾಗಲೇ ಗಟ್ಟಿಯಾಗಿರುವ ಮಹಿಳೆಯಿರ ನಿಕೃಷ್ಟ ಸ್ಥಾನಮಾನವನ್ನು ಸಮಗ್ರ ಗ್ರಾಮೀಣ ಅಭಿವೃದ್ಧಿಯೋಜನೆಯು ಊರ್ಜಿತಗೊಳಿಸುತ್ತಿರುವಂತೆ ಕಾಣುತ್ತದೆ. ಮಹಿಳಾ ಫಲಾನುಭವಿಗಳಲ್ಲಿ ಅನಕ್ಷರಸ್ಥರ ಪ್ರಮಾಣವುಪುರುಷ ಅನಕ್ಷರಸ್ಥ ಫಲಾನುಭವಿಗಳಿಗಿಂತ ಅಧಿಕ. ಕೂಲಿಯಿಂದ ವರಮಾನಗಳಿಸುತ್ತಿರುವ ಮಹಿಳಾ ಫಲಾನುಭವಿಗಳಪ್ರಮಾಣ ಕೂಲಿಯಿಂದ ವರಮಾನಗಳಿಸುತ್ತಿರುವ ಪುರುಷ ಫಲಾನುಭವಿಗಳಿಗಿಂತ ಅಧಿಕ. ಮಹಿಳಾ ಫಲಾನುಭವಿಗಳಿಗೆದೊರೆತ ಸಾಲದ ಪ್ರಮಾಣವು ಕಡಿಮೆ.

ಭಾಗ-೩:

**೪. ೩ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯ-ಕೆಲವು ಸಾಧಾರಣೀಕೃತ ತಥ್ಯಗಳು:**

ಪ್ರಸ್ತುತ ಅಧ್ಯಾಯದ ಭಾಗ-೧ ಮತ್ತು ಭಾಗ-೨ರಲ್ಲಿ ನಾವು ನಮ್ಮ ಅಧ್ಯಯನದ ಮಾಹಿತಿಯ ವಿಶ್ಲೇಷಣೆಯಿಂದ ಕಂಡುಕೊಂಡ ತಥ್ಯಗಳನ್ನು ವಿವಿಧ ಶೀರ್ಷಿಕೆಗಳಲ್ಲಿ ಮಂಡಿಸಿದ್ದೇವೆ. ಆದರೆ ಈ ಮೂರನೇ ಭಾಗದಲ್ಲಿ ನಾವು ನಡೆಸಿದ ಅಧ್ಯಯನ, ಸಂಗ್ರಹಿಸಿದ ಮಾಹಿತಿ ಹಾಗೂ ಮಾಹಿತಿಯ ವಿಶ್ಲೇಷಣೆಗಳ ಹಿನ್ನೆಲೆಯಲ್ಲಿ ಕೆಲವು ಸಾಧಾರಣೀಕೃತ ತಥ್ಯಗಳನ್ನು ಮಂಡಿಸಲು ಪ್ರಯತ್ನಿಸಲಾಗಿದೆ.

**೪.೩.೧. ಪರಿಹಾರ ಮುಖಿ ಕಾರ್ಯಕ್ರಮ:**

ನಮ್ಮ ಅಧ್ಯಯನದಿಂದ ಕಂಡುಕೊಂಡ ಒಂದು ತಥ್ಯವೆಂದರೆ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯು ಕೇವಲಬಡತನದಿಂದ ನರಳುತ್ತಿರುವವರಿಗೆ 'ಪರಿಹಾರ' ವನ್ನು, ಒಂದು ಬಗೆಯ ಸಾಂತ್ವನವನ್ನು ನೀಡುವ ಕಾರ್ಯಕ್ರಮವಾಗಿದೆ.ಔದಾರ್ಯತೆಯು ಈ ಕಾರ್ಯಕ್ರಮದ ಒಂದು ಲಕ್ಷಣವಾಗಿದೆ. ಆದರೆ ವಾಸ್ತವವಾಗಿ ಬಡತನದ ನಿವಾರಣೆಯುಔದಾರ್ಯದ ಸಂಗತಿಯಾಗಲು ಸಾದ್ಯವಿಲ್ಲ. ಈ ಅಧ್ಯಾಯದ ಎರಡನೆ ಭಾಗದಲ್ಲಿ ತೋರಿಸಿರುವಂತೆ ತಾತ್ವಿಕವಾಗಿ ಈಯೋಜನೆಯಿಂದ ಫಲಾನುಭವಿಗಳನ್ನು ಬಡತನದ ರೇಖೆಯಿಂದ ಮೇಲೆತ್ತಲು ಸಾಧ್ಯವಿಲ್ಲ. ಈ ಕಾರ್ಯಕ್ರಮದ ಒಂದುಬಹುಮುಖ್ಯ ಉದ್ದೇಶವೆಂದರೆ ಫಲಾನುಭವಿಗಳಿಗೆ ವರಮಾನ ಹಡೆಯುವ ಬಂಡವಾಳ ಸರಕುಗಳನ್ನು ಒದಗಿಸುವದಾಗಿದೆ. ಅಂದ ಮೇಲೆ ಸಮಗ್ರ ಗ್ರಾಮೀಣ ಅಭಿವೃದ್ಧಿಯೋಜನೆಯ ಕರ್ತೃಗಳು ಬಡತನದ ನಿವಾರಣೆಯನ್ನುತಾಂತ್ರಿಕ ಸಮಸ್ಯೆಯಾಗಿ ಇಲ್ಲಿ ಪರಿಭಾವಿಸಿದ್ದಾರೆ. ಒಂದು ಶ್ರೇಣೀಕೃತ ವ್ಯವಸ್ಥೆಯಲ್ಲಿ ಭೂರಹಿತ ಕಾರ್ಮಿಕರು ಗ್ರಾಮೀಣಪ್ರದೇಶದಲ್ಲಿ ಹೇಗೆ ತಾನೆ ಸ್ವಾವಲಂಬಿ ಬದುಕನ್ನು ಕಟ್ಟಿಕೊಳ್ಳಲು ಸಾಧ್ಯ? ಒಂದು ವರಮಾನ ಹಡೆಯುವ ಚಟುವಟಿಕೆಕೈಗೊಳ್ಳಲು 'ಪೂರಕ' ಸೌಲಭ್ಯಗಳು ಬೇಡವೆ? ಹೈನುಗಾರಿಕೆ ನಡೆಸಬೇಕಾದರೆ ಮೇವಿನ ಸೌಲಭ್ಯ ವಿರಬೇಕು.ಕೋಳಿಸಾಕಣಿಕೆ ಕೈಗೊಳ್ಳಲು ಮಾರುಕಟ್ಟೆ ಹಾಗೂ ಸಾರಿಗೆ ಸೌಲಭ್ಯಗಳಿರಬೇಕು.

ಸಮಗ್ರ ಗ್ರಾಮೀಣ ಅಭಿವೃದ್ಧಿಯೋಜನೆಯು ಬಡತನದ ರೇಖೆಯ ಕೆಳಗೆ ಜೀವಿಸುತ್ತಿರುವ ಕುಟುಂಬಗಳನ್ನು ಗುರಿಯಾಗಿಟ್ಟು ಕೊಂಡಿದೆ. ಬಡತನದ ರೇಖೆಯ ಕೆಳಗೆ ಜೀವಿಸುತ್ತಿರುವ ಕುಟುಂಬಗಳು ಮುಖ್ಯವಾಗಿ ಭೂಮಿ ಆಸ್ತಿಗಳಿಂದ ವಂಚಿತರಾಗಿದ್ದಾರೆ. ಈ ಕುಟುಂಬಗಳಿಗೆ ಸಮಗ್ರ ಗ್ರಾಮೀಣ ಅಭಿವೃದ್ಧಿಯೋಜನೆಯ ವತಿಯಿಂದ ಸಾಲಸೌಲಭ್ಯ ದೊರೆತಾಗ ಅದಕ್ಕೆ ಅವರ ಬಳಿ ಪೂರಕ

ಸೌಲಭ್ಯಗಳಿರುವುದಿಲ್ಲ. ಇದರಿಂದಾಗಿ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯ ವತಿಯಿಂದ ಕೈಗೊಳ್ಳುವ ಚಟುವಟಿಕೆಗಳು ಸ್ವಯಂಪೋಷಿತವಾಗಲು ಸಾಧ್ಯವಿಲ್ಲ.

ಸಮಗ್ರ ಗ್ರಾಮೀಣ ಅಭಿವೃದ್ಧಿಯೋಜನೆಗೆ ಸಂಬಂಧಿಸಿದಂತೆ ೧೯೮೦ರ ದಶಕದಿಂದಲೂ ನಡೆಯುತ್ತಾ ಬಂದಿರುವ ಒಂದುವಿವಾದಾತ್ಮಕ ಚರ್ಚೆಯೆಂದರೆ "ಬಡತನದ ನಿವಾರಣೆ ಕಾರ್ಯಕ್ರಗಳು ಉದ್ಯೋಗ ಸಾಂದ್ರವಾಗಿರಬೇಕೊ ಅಥವಾ ವರಮಾನ ಹಡೆಯುವ ಆಸ್ತಿ ನಿರ್ಮಾಣಕ್ಕೆ ಸೀಮಿತವಾಗಿರಬೇಕೊ" ಎಂಬುದಾಗಿದೆ. ದಂತವಾಲಾರವರು 'ಆಸ್ತಿನಿರ್ಮಾಣ'ದ ವಾದದ ಮುಖ್ಯ ವಕ್ತಾರರು. ಅವರ ಪ್ರಕಾರ ಉದ್ಯೋಗ ದೃಢೀಕರಣ ಕಾರ್ಯಕ್ರಮಕ್ಕಿಂತ ಸ್ವಯಂ ಉದ್ಯೋಗವನ್ನುರೂಢಿಸುವಂತಹ 'ಆಸ್ತಿ ನಿರ್ಮಾಣ'ದ ಕಾರ್ಯಕ್ರಮ ಹೆಚ್ಚು ಉಪಯುಕ್ತ.

ಜೀನ್ ಡ್ರೀಜೆಯವರು (೧೯೯೦:ಪು.A:೯೬) ಸಮಗ್ರ ಗ್ರಾಮೀಣ ಅಭಿವೃದ್ಧಿಯೋಜನೆಯ ಬಗ್ಗೆ ಎತ್ತಿರುವ ಒಂದು ಮೂಲ ಭೂತ ಪ್ರಶ್ನೆಯೆಂದರೆ 'ಫಲಾನುಭವಿಗಳಿಗೆ ವರಮಾನ ಹಡೆಯುವ ಆಸ್ತಿಯನ್ನು ಒದಗಿಸಿಕೊಡುವುದು'ಎಂಬುದರ ಪ್ರಸ್ತುತತೆಯಾಗಿದೆ.ಸಮಗ್ರ ಗ್ರಾಮೀಣ ಅಭಿವೃದ್ಧಿಯೋಜನೆಯನ್ನು 'ವರಮಾನ ಹಡೆಯುವ ಆಸ್ತಿ ನಿರ್ಮಾಣ'ಕಾರ್ಯಕ್ರಮ ಎಂದು ಹೇಳಲಾಗಿದೆ. ಆದರೆ ಈ ಕಾರ್ಯಕ್ರಮ ನಿಜವಾಗಿ ಫಲಾನುಭವಿಗಳಿಗೆ ವರಮಾನ ಹಡೆಯುವ ಬಂಡವಾಳ ಆಸ್ತಿ ಒದಗಿಸುವ ಕಾರ್ಯಕ್ರಮವಲ್ಲ. ಇದಕ್ಕೆ ಪ್ರತಿಯಾಗಿ ವರಮಾನ ಹಡೆಯುವ ಆಸ್ತಿಯನ್ನು ಖರೀದಿಸಲುಸಾಲನೀಡುವ ಕಾರ್ಯಕ್ರಮವೆಂಬುದೇ ಈ ಯೋಜನೆಯ ಸೂಕ್ತ ವಿವರಣೆಯಾದೀತು.

ನಮ್ಮ ಅದ್ಯಯನದ ನಮೂನೆಯಲ್ಲಿರುವ ಒಟ್ಟು ಫಲಾನುಭವಿಗಳಲ್ಲಿ (೫೨) ಶೇ ೬೦ಕ್ಕೂ ಮಿಕ್ಕು ಫಲಾನುಭವಿಗಳಿಗೆ ದೊರೆತ ಸಾಲದ ಮೊತ್ತ ೨೦೦೦ರಿಂದ ೫೦೦೦ರೂಪಾಯಿ ಮೊತ್ತದಲ್ಲಿ ಎಂಬುದು ಕೋಷ್ಟಕ ೩.೬ರಿಂದ ಸ್ಪಷ್ಟವಾಗುತ್ತದೆ. ಈ ಮೊತ್ತದಿಂದ ಯಾವ ಬಗೆಯ ವರಮಾನ ಹಡೆಯುವ ಆಸ್ತಿಯನ್ನು ರೂಢಿಸಿಕೊಳ್ಳಬಹುದು?

**೪.೩.೨ ಉದ್ಯೋಗ ನೀಡುವ ಕಾರ್ಯಕ್ರಮ:**

ಸಮಗ್ರ ಗ್ರಾಮೀಣ ಅಭಿವೃದ್ಧಿಯೋಜನೆಯು ಉದ್ಯೋಗ ನೀಡುವ ಕಾರ್ಯಕ್ರಮದಲ್ಲಿ ಇದೊಂದು ಸ್ವಯಂ ಉದ್ಯೋಗವನ್ನು ಪ್ರೋತ್ಸಾಹಿಸುವ ಕಾರ್ಯಕ್ರಮ. ಆದರೆ ವಿದ್ವಾಂಸರು ನಡೆಸಿದ ಅಧ್ಯಯನಗಳಿಂದ ತಿಳಿದು ಬಂದಿರುವ ತಥ್ಯವೆಂದರೆ ಬಡತನದ ರೇಖೆಯಿಂದ ಕೆಳಗೆ ಬದುಕುತ್ತಿರುವವರಿಗೆ ಉದ್ಯೋಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ,
ಗ್ರಂಥಾಲಯ.

ದೃಢೀಕರಣವು ಹಸಿವಿನಿಂದ ರಕ್ಷಣೆಒದಗಿಸಬಲ್ಲದು ಎಂಬುದಾಗದೆ. ಸಮಗ್ರ ಗ್ರಾಮೀಣ ಅಭಿವೃದ್ಧಿಯೋಜನೆಯಡಿಯಲ್ಲಿ ವರಮಾನ ಒದಗಿಸುವ ಚಟುವಟಿಕೆಗಳನ್ನು ಕೈಗೊಳ್ಳುವಷ್ಟು ಸಾಹಸ ಪ್ರವೃತ್ತಿ ಮತ್ತು ಗಂಡಾಂತರ ಎದುರಿಸುವ ಛಾತಿ ಬಡವರ್ಗಕ್ಕಿರುವುದಿಲ್ಲ. ಬಡವರ್ಗದ ಜನ ಸ್ವಯಂ ಉದ್ಯೋಗ ಕಾರ್ಯಕ್ರಮಗಳನ್ನು ಕೈಗೊಳ್ಳಲು ಹಿಂಜರಿಯುತ್ತಾರೆ. ಉದ್ಯೋಗ ದೃಢೀಕರಣ ಯೋಜನೆಯು ಬಡತನದಿಂದ ನರಳುತ್ತಿರುವವರಿಗೆ ರಕ್ಷಣೆ ಯೊದಗಿಸೀತು. ಆದರೆ ಸಮಗ್ರ ಗ್ರಾಮೀಣ ಅಭಿವೃದ್ಧಿಯೋಜನೆಗೆ ಬೆಂಬಲ ಯಾವ ವರ್ಗದಿಂದ ದೊರೆಯುತ್ತದೆ.?

ಸಮಗ್ರ ಗ್ರಾಮೀಣ ಅಭಿವೃದ್ಧಿಯೋಜನೆಯು ನಮ್ಮ ಸಮಾಜದಲ್ಲಿರುವ ಪಟ್ಟ ಭದ್ರ ಹಿತಾಸಕ್ತಿಗಳಿಗೆ ಅನುಕೂಲಕರವಾಗಿದೆ.ಈ ಕಾರ್ಯಕ್ರಮದ ಸೌಲಭ್ಯಗಳನ್ನು ದುರುಪಯೋಗ ಪಡಿಸಿಕೊಳ್ಳಲಾಗುತ್ತಿದೆ.ಇದಕ್ಕೆ ಪ್ರತಿಯಾಗಿ ಉದ್ಯೋಗ ದೃಢೀಕರಣ ಯೋಜನೆಯಲ್ಲಿ ಕಡು ಬಡವರಿಗೆ ಮಾತ್ರ ನೆರವು ಸಿಗುತ್ತದೆ. ಆದರೆ ಸಮಗ್ರ ಗ್ರಾಮೀಣ ಅಭಿವೃದ್ಧಿಯೋಜನೆಯಲ್ಲಿ ಅರ್ಹರಲ್ಲದವರೂ ನೆರವು ಪಡೆದುಕೊಂಡು ಬಿಡಬಹುದು. ಇದೇ ಕಾರಣಕ್ಕೆ ಈ ಯೋಜನೆಯಡಿಯಲ್ಲಿ ಬಡತನದ ರೇಖೆಯ ಮೇಲಿರುವವರಿಗೂ ನೆರವು ಲಭ್ಯವಾಗುತ್ತದೆ. ನಮ್ಮ ಅಧ್ಯಯನದಲ್ಲಿ ಒಟ್ಟುಫಲಾನುಭವಿಗಳಲ್ಲಿ ಶೇ ೨೧.೧೫ರಷ್ಟು ಬಡತನದ ರೇಖೆ ಮೇಲಿರುವವರಾಗಿದ್ದಾರೆ. ಜೀನ್ ಡ್ರೀಜೆ ಪ್ರಕಾರ ಬಡತನದರೇಖೆಯ ಕೆಳಗೆ ಬದುಕುತ್ತಿರುವ ಕಡುಬಡವರೆಲ್ಲರಿಗೂ ಸಮಗ್ರ ಗ್ರಾಮೀಣ ಅಭಿವೃದ್ಧಿಯೋಜನೆಯ ನೆರವು ಯಾಕೆದೊರೆಯುವುದಿಲ್ಲ ಎಂಬುದಕ್ಕೆ ಮೂರು ಕಾರಣಗಳುಂಟು.

೧) ಬ್ಯಾಂಕು ಸಾಲವು ಯೋಜನೆಗೆ ಮುಂಜೂರಾಗಿದ್ದರೂ ಸಹ ಅದನ್ನು ತನ್ನ ವಶಮಾಡಿಕೊಳ್ಳುವ ಸಾಮರ್ಥ್ಯಕಡುಬಡುವರಿಗೆ ಇಲ್ಲ.

೨) ಬ್ಯಾಂಕು ಅಧಿಕಾರಿಗಳು ಕಡುಬಡವರಿಗೆ ಸಾಲ ನೀಡಲು ಹಿಂಜರಿಯುತ್ತಾರೆ.

೩) ಸ್ವಯಂ ಉದ್ಯೋಗ, ಬ್ಯಾಂಕು ಸಾಲ, ಮಾರುಕಟ್ಟೆ ನಿರ್ವಹಣೆ ಮುಂತಾದವುಗಳು ಒಳಗೊಳ್ಳುವ ಗಂಡಾಂತರಗಳಿಗೆ ಹೆದರಿ ಕಡುಬಡವರು ಸ್ವ ಇಚ್ಛೆಯಿಂದ ಸಾಲಪಡೆಯಲು ಮುಂದೆ ಬರುವುದಿಲ್ಲ.

**೪.೩.೩ ಬಡತನದ ರೇಖೆ-ಕೆಲವು ಪ್ರಶ್ನೆಗಳು:**

ಸಮಗ್ರ ಗ್ರಾಮೀಣ ಅಭಿವೃದ್ಧಿಯೋಜನೆಯಲ್ಲಿ ಬಳಸಿರುವ ಬಡತನದ ಪರಿಕಲ್ಪನೆಯು ವರಮಾನ ಮುಖಿ ಬಡತನವಾಗಿದೆ.ವರಮಾನವು ಇಲ್ಲಿ ಬಡತನದ ಮಾನದಂಡವಾಗಿದೆ. 'ವರಮಾನ ಮುಖಿ ಬಡತನ' ಪರಿಭಾವನೆ ಬಗ್ಗೆ ಇಂದು ತೀವ್ರಟೀಕೆಗಳು ವ್ಯಕ್ತವಾಗುತ್ತಿವೆ. ಅಮರ್ತ್ಯಸೇನ್ , ಮೆಹಬೂಬ್ -ಉಲ್ -

ಹಕ್ , ಜೀನ್ ಡ್ರೀಜೆ ಮುಂತಾದವರ ಪ್ರಕಾರ ವರಮಾನವು ಬಡತನದ ಒಂದು ಮುಖ ಮಾತ್ರವಾಗಿದೆ. ಬಡತನದವು ಬಹು ಮುಖಿ ಸಮಸ್ಯೆಯಾಗಿದೆ.

ವರಮಾನ ಮುಖಿ ಬಡತನವು ಬಡತನದ ಬಹುಮುಖಿ ಸ್ವರೂಪವನ್ನು ಹಿಡಿದಿಡುವುದರಲ್ಲಿ ವಿಫಲವಾಗಿದೆ. ಊರೋಟ್ಟಿನಸಂಪನ್ಮೂಲಗಳ ಲಭ್ಯತೆ, ಕುಡಿಯುವ ನೀರಿನ ಸೌಲಭ್ಯ, ಆರೋಗ್ಯ ಸೌಲಭ್ಯ, ಶಿಕ್ಷಣ ಸೌಲಭ್ಯ ಮುಂತಾದವುಗಳುಜನರ ಬದುಕಿನ ಸ್ಥಿತಿಗತಿಗಳ ಮೇಲೇ ತೀವ್ರ ಪರಿಣಾಮ ಬೀರುತ್ತವೆ. ಬಡನವನ್ನು ಕೇವಲ ವರಮಾನದ ನೆಲೆಗೆ ಸೀಮಿತಗೊಳಿಸಿರುವುದರಿಂದ ಬಡತನದ ಇತರೆ ಮುಖಗಳು ನಿರ್ಲಕ್ಷ್ಯಕ್ಕೆ ಗುರಿಯಾಗಿ ಬಿಟ್ಟಿವೆ. ಆರೋಗ್ಯ, ಕುಡಿಯುವನೀರು, ಶಿಕ್ಷಣ, ಪೌಷ್ಟಿಕ ಆಹಾರ ಮುಂತಾದವುಗಳನ್ನು ಒದಗಿಸುವ ಮೂಲಕವೂ ಬಡತನವನ್ನು ನಿವಾರಣೆ ಮಾಡಬಹುದು ಎಂಬುದನ್ನು ಸಮಗ್ರ ಗ್ರಾಮೀಣ ಅಭಿವೃದ್ಧಿಯೋಜನೆಯ ಕರ್ತೃಗಳು ಅರಿತುಕೊಳ್ಳಬೇಕು.'ವರಮಾನ ಮುಖಿ ಬಡತನ'ಕ್ಕೆ ಮಾತ್ರ ಸೀಮಿತವಾದ ಸಮಗ್ರ ಗ್ರಾಮೀಣ ಅಭಿವೃದ್ಧಿಯೋಜನೆಯು ಬಡತನವನ್ನು ನಿವಾರಿಸಲು ಸಾಧ್ಯವಿಲ್ಲ.

**೪.೩.೪ ಸಮಗ್ರ ಕಾರ್ಯಕ್ರಮದ ಸಮಗ್ರ ಸ್ವರೂಪ:**

ಈ ಕಾರ್ಯಕ್ರಮವನ್ನು 'ಸಮಗ್ರ' ಎಂಬ ವಿಶೇಷಣದಿಂದ ಗುರುತಿಸಲಾಗಿದೆ. ಈ ಕಾರ್ಯಕ್ರಮವು ಯಾವ ನೆಲೆಯಲ್ಲಿ'ಸಮಗ್ರ' ಕಾರ್ಯಕ್ರಮವಾಗಿದೆ? ಈ ಕಾರ್ಯಕ್ರಮದಲ್ಲಿ 'ನೆರವಿನಕೂಟ'ವೇ ಇದೆ ಎನ್ನಲಾಗಿದೆ. ಆದರೆ ವಾಸ್ತವವಾಗಿಇದು ಸಹಾಯಧನದಿಂದ ಕೂಡಿದ ಬ್ಯಾಂಕು ಸಾಲ ಕೊಡಿಸುವ ಒಂದು ಪ್ರಕ್ರಿಯೆಗೆ ಸೀಮಿತವಾಗಿದೆ. ಈ ಕಾರ್ಯಕ್ರಮವನ್ನು ಸ್ಥಳೀಯ ಅಭಿವೃದ್ಧಿ ಕಾರ್ಯಕ್ರಮ ದೊಂದಿಗೆ ಸಮನ್ವಯಗೊಳಿಸಿಲ್ಲ. ಫಲಾನುಭವಿಗಳಿಗೆ ತರಬೇತಿ ಕಾರ್ಯಕ್ರಮ ಇದರಲ್ಲಿ ಅಡಕವಾಗಿಲ್ಲ.ಇದೊಂದು ಏಕಾಕಾರಿಕಾರ್ಯಕ್ರಮವಾಗಿದೆ ವಿನಾ 'ಸಮಗ್ರ'ಕಾರ್ಯಕ್ರಮವಾಗಿಲ್ಲ. ಸಮಗ್ರ ಗ್ರಾಮೀಣ ಅಭಿವೃದ್ಧಿಯೋಜನೆಯು ಒಂದು ಪ್ರತ್ಯೇಕವಾದ ಬಡವರಿಗೆ ಪರಿಹಾರಒದಗಿಸುವ ಕಾರ್ಯಕ್ರಮವಾಗಿದ.

**೪.೩.೫ ಏಕಾಕಾರಿ ಬಡವರ ಗುಂಪು:**

ಬಡತನದ ರೇಖೆಯ ಕೆಳಗೆ ಜೀವಿಸುತ್ತಿರುವ ಕುಟುಂಬಗಳಲ್ಲಿ 'ಬಡವರು' ಎಂದು ಒಂದು ಗುಂಪು ಮಾಡಲಾಗುತ್ತಿದೆ.ಇಲ್ಲಿ 'ಬಡವರು' ಮತ್ತು 'ಬಡವರಲ್ಲದವರು' ಎಂಬ ಎರಡು ಗುಂಪುಗಳಿವೆ. ವಾಸ್ತವದಲ್ಲಿ ಬಡವರು ಎಂಬ ಗುಂಪುಏಕಾರೂಪಿ ಲಕ್ಷಣಗಳಿಂದ ಕೂಡಿರುವ ಗುಂಪಲ್ಲ. ಗ್ರಾಮೀಣ ಪ್ರದೇಶದಲ್ಲಿ ಬಡತನದ ರೇಖೆಯ ಕೆಳಗೆ ಜೀವಿಸುತ್ತಿರುವವರಲ್ಲಿ ಬಡತನದ ತೀವ್ರತೆಯು ಭಿನ್ನವಾಗಿರುತ್ತದೆ. ಭೂರಹಿತ

ಕೃಷಿ ಕಾರ್ಮಿಕ ಕುಟುಂಬ ಹಾಗೂ ಅತಿ ಸಣ್ಣರೈತ ಕುಟುಂಬಗಳೆರಡೂ ಬಡತನದ ರೇಖೆಯ ಕೆಳಗೆ ಜೀವಿಸುತ್ತಿರುತ್ತವೆ. ಆದರೆ ಇವೆರಡೂ ಕುಟುಂಬಗಳ ಬಡತನದ ತೀವ್ರತೆಯು ಏಕಸ್ವರೂಪದಲ್ಲಿರಲು ಸಾಧ್ಯವಿಲ್ಲ. ಬಡವರು ಎಂದು ಗುರುತಿಸುವ ಗುಂಪಿನೊಳಗೆ ಆದ್ಯತೆಯ ಪ್ರಶ್ನೆ ಇದೆ. ಆದರೆ ಸಮಗ್ರ ಗ್ರಾಮೀಣ ಅಭಿವೃದ್ಧಿಯೋಜನೆಯಲ್ಲಿ ಇಂತಹ ಆದ್ಯತೆಗೆ ಅವಕಾಶವಿಲ್ಲವಾಗಿದೆ. ಇದರಿಂದಾಗಿ 'ಬಡವರು' ಎಂಬ ಗುಂಪಿನಲ್ಲೇ ಸ್ವಲ್ಪ ಉತ್ತಮವಾಗಿರುವವರು ಯೋಜನೆಯ ಲಾಭವನ್ನು ಪಡೆಯುತ್ತಿರುವ ವಿಕೃತಿ ಉಂಟಾಗಿದೆ. ಬಡವರು ಎಂಬ ವರ್ಗದ ಕೆಳಸ್ತರದಲ್ಲಿರುವ ಕಡುಬಡವರ-ಅತಿಬಡವರ ಪರಿಸ್ಥಿತಿ ಹದಗೆಡುತ್ತಿದೆ. ಅವರಿಗೆ ಈ ಕಾರ್ಯ ಕ್ರಮದಲ್ಲಿ ಯಾವುದೇ ಆದ್ಯತೆ ಇಲ್ಲವಾಗಿದ.

ಕೊನೆಯದಾಗಿ ಸಮಗ್ರ ಗ್ರಾಮೀಣ ಅಭಿವೃದ್ಧಿಯೋಜನೆಯನ್ನು ಬಡತನ ನಿವಾರಣಾ ಕಾರ್ಯಕ್ರಮವೆಂದು ಕರೆಯುವುದುಸಾದ್ಯವಿಲ್ಲ. ಸಹಾಯಧನ ಸಹಿತ ಸಾಲ ನೀಡಿ ಬಡತನವನ್ನು ನಿವಾರಣೆ ಮಾಡುವುದು ಸಾಧ್ಯವೂ ಇಲ್ಲ. ಈ ಯೋಜನೆಯಡಿಯಲ್ಲಿ ಸಾಲಪಡೆದ ವರ್ಷ ಫಲಾನುಭವಿ ಕುಟುಂಬವು ತಾತ್ಕಾಲಿಕವಾಗಿ ಬಡತನದ ರೇಖೆ ಮೇಲೆ ಬರಬಹುದು, ಆದರೆ ತದನಂತರ ಮತ್ತೆ ಕುಟುಂಬವು ಬಡತನದ ರೇಖೆಯ ಕೆಳಗೆ ಜರುಗುವುದು ಗ್ಯಾರಂಟಿ. ವರಮಾನಮುಖಿ ಅಭಿವೃದ್ಧಿ ಕಾರ್ಯಕ್ರಮದಿಂದ ಬಡತನದ ನಿವಾರಣೆ ಸಾಧ್ಯವಿಲ್ಲ. ಬಡತನವನ್ನು ಆಡಳಿತಾತ್ಮಕ ಕಾರ್ಯಕ್ರಮದ ಮೂಲಕನಿವಾರಿಸಲು ಸಾಧ್ಯವೂ ಇಲ್ಲ. ಏಕೆಂದರೆ ಇಲ್ಲಿ ಅಭಿವೃದ್ಧಿಯನ್ನು ಬಡವರ ಉದ್ಧಾರವನ್ನು ಔದಾರ್ಯದ ನೆಲೆಯಲ್ಲಿಪರಿಭಾವಿಸಲಾಗಿದೆ. ದಾನ-ದತ್ತಿ ದಕ್ಷಣೆ-ಔದಾರ್ಯಗಳಿಂದ ಬಡತನವನ್ನು ನಿವಾರಿಸುವುದು ಸಾಧ್ಯವಿಲ್ಲ. ಒಂದು ವೇಳೆಅದು ಸಾಧ್ಯವಾಗುವಂತಾಗಿದ್ದರೆ ಭಾರತದಲ್ಲಿ ಬಡತನ ಎಂದೊ ಮಾಯವಾಗಬೇಕಾಗಿತ್ತು. ಬಡತನವು ಅಮೂರ್ತವಾದ ಭಾವನೆಯೇನಲ್ಲ. ಅದೊಂದು ಮೂರ್ತವಾದ ಒಂದು ಸಮಸ್ಯೆ. ಅದನ್ನು ರಾಜಕೀಯ-ಸಾಮಾಜಿಕ-ಆರ್ಥಿಕ ನೆಲೆಗಳಲ್ಲೇಎದುರಿಸಬೇಕಾಗುತ್ತದೆ.

## ಅಧ್ಯಾಯ- ೫

### ಅಧ್ಯಯನದ ಸಾರಾಂಶ ಮತ್ತು ಬಡತನದ ನಿವಾರಣೆಗೆ ಸಂಬಂಧಿಸಿದ ನೀತಿ ನಿರೂಪಣೆ

ಈ ಐದನೇ ಮತ್ತು ಕೊನೆಯ ಅಧ್ಯಾಯದಲ್ಲಿ ಪ್ರಸ್ತುತ ಅಧ್ಯಯನದ ಸಾರಾಂಶವನ್ನು ಸ್ಥೂಲವಾಗಿ ನೀಡಲು ಪ್ರಯತ್ನಿಸಿದ್ದೇವೆ. ಇದರ ಜೊತೆಗೆ ಬಡತನದ ನಿವಾರಣೆಗೆ ಸಂಬಂಧಿಸಿದಂತೆ ಕೆಲವು ಪರ್ಯಾಯ ಕ್ರಮಗಳನ್ನು ಸಲಹೆ ಮಾಡಿದ್ದೇವೆ.

ಪ್ರಸ್ತುತ ಅಧ್ಯಯನವು ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯ ಅನುಷ್ಠಾನ ಪ್ರಕ್ರಿಯೆ ಹಾಗೂ ಪರಿಣಾಮಗಳನ್ನು ಕುರಿತ ಅಧ್ಯಯನವಾಗಿದೆ. ನಮ್ಮ ಅಧ್ಯಯನಕ್ಕೆ ಹಗರಿಬೊಮ್ಮನಹಳ್ಳಿ ತಾಲ್ಲೂಕನ್ನು ಅಧ್ಯಯನ ಕ್ಷೇತ್ರವನ್ನಾಗಿ ಆರಿಸಿಕೊಂಡಿದ್ದೇವೆ. ಈ ಅಧ್ಯಯನದಲ್ಲಿ ಅಭಿವೃದ್ಧಿ ಕುರಿತ ಸೈದ್ಧಾಂತಿಕ ನೆಲೆಗಳನ್ನು ಚರ್ಚಿಸಲು ಪ್ರಯತ್ನಿಸಲಾಗಿದೆ. ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯಲ್ಲಿ ಫಲಾನುಭವಿಗಳನ್ನು ಹೇಗೆ ಆಯ್ಕೆ ಮಾಡಲಾಗುತ್ತದೆ? ಆಯ್ಕೆಯಾದ ಮೇಲೆ ಬ್ಯಾಂಕುಗಳಿಂದ ಸಾಲ ದೊರೆಯಲು ಎಷ್ಟು ಸಮಯ ಬೇಕು? ಸಾಲದ ಸರಾಸರಿ ಮೊತ್ತವೆಷ್ಟು? ಫಲಾನುಭವಿಗಳ ಆಯ್ಕೆಯಲ್ಲಿ ಮೀಸಲಾತಿಯನ್ನು ಬಿಗಿಯಾಗಿ ಅನುಸರಿಸಲಾಗುತ್ತಿದೆಯೇ? - ಇವೆ ಮುಂತಾದ ಅನುಷ್ಠಾನ ಪ್ರಕ್ರಿಯೆಗೆ ಸಂಬಂಧಿಸಿದ ಪ್ರಶ್ನೆಗಳನ್ನು ಹಾಗೂ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯಿಂದಾಗಿ ಫಲಾನುಭವಿಗಳ ವರಮಾನದಲ್ಲಿ ಉಂಟಾದ ಬದಲಾವಣೆಗಳೇನು? ಬಡತನದ ರೇಖೆಯಿಂದ ಮೇಲೆ ಫಲಾನುಭವಿಗಳು ಜಿಗಿದಿದ್ದಾರೆಯೆ? ಇದು ಹೇಗೆ ' ಸಮಗ್ರ ' ಕಾರ್ಯಕ್ರಮ? ಸಾಲದ ಮರುಪಾವತಿ ಸ್ವರೂಪ ಯಾವ ಬಗೆಯದು? ಇಲ್ಲಿ ಲಿಂಗಸಂಬಂಧ ಸ್ವರೂಪ ಯಾವ ನೆಲೆಯಲ್ಲಿದೆ? - ಇವೆ ಮುಂತಾದ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯ ಪರಿಣಾಮಗಳನ್ನು ಅಭ್ಯಸಿಸಲು ಪ್ರಯತ್ನಿಸಲಾಗಿದೆ.

ಪ್ರಸ್ತುತ ಅಧ್ಯಯನಕ್ಕೆ ಹಗರಿಬೊಮ್ಮನಹಳ್ಳಿ ತಾಲ್ಲೂಕಿನಲ್ಲಿ ಪ್ರಜ್ಞಾಪೂರ್ವಕವಾಗಿ ೫೨ ಫಲಾನುಭವಿ ಕುಟುಂಬಗಳನ್ನು ಆಯ್ಕೆ ಮಾಡಿಕೊಳ್ಳಲಾಯಿತು. ಇವರಲ್ಲಿ ೩೩ ಪುರುಷರು ಮತ್ತು ೧೯ ಮಹಿಳೆಯರು ಇದ್ದಾರೆ.ನಮ್ಮ ಅಧ್ಯಯನಕ್ಕೆ ಅಗತ್ಯವಾದ ಮಾಹಿತಿಯನ್ನು ಪ್ರಶ್ನಾವಳಿ -ಸಂದರ್ಶನ ಮೂಲಕ ಸಂಗ್ರಹಿಸಲಾಯಿತು.

## ೫.೧ ಅನುಷ್ಠಾನ ಪ್ರಕ್ರಿಯೆ

ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯ ಅನುಷ್ಠಾನ ಪ್ರಕ್ರಿಯೆಯನ್ನು ಪರೀಕ್ಷಿಸಲು ನಾವು ಫಲಾನುಭವಿಗಳ ಆಯ್ಕೆ ,ಗ್ರಾಮಸಭೆಯ ಪಾತ್ರ , ಮೀಸಲಾತಿ ,ಬ್ಯಾಂಕುಗಳ ಪಾತ್ರ , ಸರ್ಕಾರಿ ಅಧಿಕಾರಿಗಳ ಪಾತ್ರ ಮುಂತಾದವುಗಳನ್ನು ಆಯ್ಕೆ ಮಾಡಿಕೊಂಡಿದ್ದೇವೆ . ಈ ಸಂಗತಿಗಳನ್ನು ಕುರಿತಂತೆ ನಮ್ಮ ಅಧ್ಯಯನದಿಂದ ಹೊರಬಂದ ತಥ್ಯಗಳು ಹೀಗಿವೆ.

೧) ಎಲ್ಲಾ ಫಲಾನುಭವಿಗಳೂ ಗ್ರಾಮ ಸಭೆಯಿಂದಲೇ ಆಯ್ಕೆಯಾಗುತ್ತಿಲ್ಲ

೨) ಗ್ರಾಮ ಸಭೆಯಿಂದ ಆಯ್ಕೆಯಾದವರಲ್ಲೂ ಬಡತನದ ರೇಖೆಯ ಮೇಲೆ ಜೀವಿಸುತ್ತಿರುವ ಕುಟುಂಬಗಳೂ ಫಲಾನುಭವಿಗಳಾಗಿ ಆಯ್ಕೆಯಾಗಿದ್ದಾರೆ.

೩) ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯು ಮೇಲಿನಿಂದ ಹೇರಲ್ಪಟ್ಟ ಆಡಳಿತಾತ್ಮಕ ಕಾರ್ಯಕ್ರಮವಾಗಿದೆ ವಿನಾ ಜನರ ಸಂಘಟನೆ - ಸಂಘರ್ಷದ ಫಲವಾಗಿ ಮೂಡಿಲ್ಲ. ಫಲಾನುಭವಿಗಳು ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯಡಿಯಲ್ಲಿನ ಸೌಲಭ್ಯವನ್ನು ಸರ್ಕಾರದ ಔದಾರ್ಯವೆಂದು ಪರಿಭಾವಿಸುತ್ತಿದ್ದಾರೆ ವಿನಾ ಅದು ನಮ್ಮ ಪಾಲಿನ ಹಕ್ಕು ಎಂದು ಭಾವಿಸುತ್ತಿಲ್ಲ.

೪) ಬ್ಯಾಂಕುಗಳು ಹಾಗೂ ಬ್ಯಾಂಕುಗಳ ಅಧಿಕಾರಿಗಳು ಬಡತನದ ರೇಖೆ ಕೆಳಗೆ ಬದುಕು ದೂಡುತ್ತಿರುವ ಕುಟುಂಬಗಳ ಬಗ್ಗೆ ಔದಾಸೀನ್ಯ ಭಾವನೆ ತಳೆದಿರುವುದು ನಮ್ಮ ಅಧ್ಯಯನದಿಂದ ಕಂಡು ಬಂದಿದೆ. ಅನಗತ್ಯ ಕಾಲ ವಿಳಂಬ ಸಾಲ ವಿತರಣೆಯಲ್ಲಿ ಉಂಟಾಗುವುದನ್ನು ನಮ್ಮ ಅಧ್ಯಯನ ಗುರುತಿಸಿದೆ.

೫) ಈ ಯೋಜನೆಯಡಿಯಲ್ಲಿ ಫಲಾನುಭವಿಗಳಿಗೆ ಯಾವುದೇ ರೀತಿಯ ತರಬೇತಿಗೆ ಅವಕಾಶವಿಲ್ಲ. ತರಬೇತಿ ನೀಡುವುದು ಈ ಕಾರ್ಯಕ್ರಮದಲ್ಲಿ ಅಂತರ್ಗತಗೊಂಡಿಲ್ಲ.

ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯ ಅನುಷ್ಠಾನ ಪ್ರಕ್ರಿಯೆಗೆ ಸಂಬಂಧಿಸಿದಂತೆ ನಮ್ಮ ಅಧ್ಯಯನವು ಕಂಡುಕೊಂಡ ತಥ್ಯಗಳನ್ನು ಮೇಲೆ ಮಂಡಿಸಿದ್ದೇವೆ. (ವಿವರಗಳಿಗೆ ಭಾಗ ೩.೧.೧ ರಿಂದ ೩.೧.೬ ನೋಡಿ )

೫.೨ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯ ಪರಿಣಾಮಗಳು

ಈ ಭಾಗದಲ್ಲಿ ನಮ್ಮ ಅಧ್ಯಯನದಲ್ಲಿ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯಿಂದ ಉಂಟಾದ ಪರಿಣಾಮಗಳನ್ನು ಸಂಕ್ಷಿಪ್ತವಾಗಿ ವಿವರಿಸಿದ್ದೇವೆ.

೧) ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಗ್ರಾಮೀಣ ಪ್ರದೇಶವನ್ನು 'ಏಕರೂಪಿ ಆರ್ಥಿಕ ರಚನೆ ' ಎಂದು ಗುರುತಿಸಿದ್ದೇವೆ.ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯು ಏಕರೂಪಿ ಆರ್ಥಿಕ ರಚನೆಯನ್ನು ಮುರಿದು ಬಹುರೂಪಿ ಆರ್ಥಿಕ ರಚನೆ ಒಡಮೂಡಲು ಅನುವು ಮಾಡಿಕೊಡಬೇಕಾಗಿತ್ತು . ಆದರೆ ನಮ್ಮ ಅಧ್ಯಯನ ಕ್ಷೇತ್ರದಲ್ಲಿ ಗ್ರಾಮಗಳು ಏಕರೂಪಿ ಆರ್ಥಿಕ ರಚನೆಗಳಾಗಿ ಮುಂದುವರಿಯುತ್ತಿದ್ದಾವೆ ಎಂಬುದನ್ನು ಗುರುತಿಸಿದ್ದೇವೆ. (ವಿವರಗಳಿಗೆ ೩.೨.೧ ನೋಡಿ)

೨) ನಮ್ಮ ಅಧ್ಯಯನದಲ್ಲಿ ಶೇ.೬೦ ಕ್ಕೂ ಮಿಕ್ಕು ಫಲಾನುಭವಿಗಳಿಗೆ ದೊರೆತ ಸರಾಸರಿ ಸಾಲದ ಮೊತ್ತ ೨೦೦೦ ರೂಪಾಯಿಯಿಂದ ೫೦೦೦ ರೂಪಾಯಿವರೆಗಿದೆ. ಈ ಸಾಲದ ಮೊತ್ತವನ್ನು ವ್ಯವಹಾರದ ಮೇಲೆ ಹೂಡಿದಾಗ ಪ್ರತಿಫಲ ಶೇ.೩೦ರಷ್ಟಾದರೂ ಸಹ ಪ್ರಾಪ್ತವಾದ ವರಮಾನವು ಫಲಾನುಭವಿಗಳನ್ನು ಬಡತನದ ರೇಖೆಯ ಮೇಲೆ ತರಲು ಸಾಧ್ಯವಿಲ್ಲ.ಇದು ಈ ಕಾರ್ಯಕ್ರಮದ ಮೂಲ ದೋಷವಾಗಿದೆ. ಬಡತನದ ನಿವಾರಣೆ ಕಾರ್ಯಕ್ರಮವೆಂದು ಇದನ್ನು ಕರೆಯಲು ಸಾಧ್ಯವಿಲ್ಲ (೩.೨.೨)

೩) ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯಡಿಯ ಸಾಲವೆಂದರೆ ವಾಪಸ್ಸು ಮಾಡುವ ಅವಶ್ಯಕತೆಯಿಲ್ಲವೆಂಬ ಭಾವನೆ ವ್ಯಾಪಕವಾಗಿದೆ. ಈ ಭಾವನೆಯಿಂದಾಗಿ ಮಧ್ಯವರ್ತಿಗಳ - ದಲ್ಲಾಳಿಗಳ ಹಾವಳಿ ಅಧಿಕ ಹಾಗೂ ಸಾಲವನ್ನು ಮರುಪಾವತಿಮಾಡದಿರುವ ಫಲಾನುಭವಿಗಳೇ ಅಧಿಕ.

ಸಾಲ ಮರುಪಾವತಿ ಮಾಡದಿರಲು ಕಾರಣವೇನು ಎಂಬುದನ್ನು ಪರಿಶೀಲಿಸಿದಾಗ ತಿಳಿದು ಬಂದ ಸಂಗತಿಯೆಂದರೆ ಸರ್ಕಾರವು ಸಾಲಮನ್ನಾ ಮಾಡುತ್ತದೆ ಎಂಬ ನಿರೀಕ್ಷೆ ಫಲಾನುಭವಿಗಳಲ್ಲಿರುವುದು ತಿಳಿದು ಬಂತು(೩.೨.೩)

೪)ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯಡಿಯಲ್ಲಿ ಸಾಲ ಸೌಲಭ್ಯ ಪಡೆದ ಫಲಾನುಭವಿಗಳಲ್ಲಿ ಸ್ತ್ರೀಯರು ಮತ್ತು ಪುರುಷರ ಸ್ಥಾನ- ಮಾನ ಹಾಗೂ ಸ್ಥಿತಿಗತಿಗಳನ್ನು ತುಲನಾತ್ಮಕವಾಗಿ ಪರಿಶೀಲಿಸಲಾಯಿತು. ನಮ್ಮ ಅಧ್ಯಯನದಿಂದ ಕಂಡು ಬಂದ ತಥ್ಯವೆಂದರೆ ಪುರುಷ ಫಲಾನುಭವಿಗಳಲ್ಲಿ

ಸಾಕ್ಷರತೆ ಪ್ರಮಾಣವು ಮಹಿಳಾ ಫಲಾನುಭವಿಗಳಿಗಿಂತ್ಮ ದೊರೆತ ಸರಾಸರಿ ಸಾಲದ ಮೊತ್ತವು ಪುರುಷ ಫಲಾನುಭವಿಗಳಿಗೆ ದೊರೆತ ಸಾಲದ ಮೊತ್ತಕ್ಕಿಂತ ಕಡಿಮೆ ಇದೆ.

ಫಲಾನುಭವಿಗಳ ವೃತ್ತಿ ಸ್ವರೂಪವನ್ನು ಪರಿಗಣಿಸಿದಾಗ ಮಹಿಳಾ ಫಲಾನುಭವಿಗಳಲ್ಲಿ ಕೂಲಿಕಾರರ ಪ್ರಮಾಣವು ಅಧಿಕವಾಗಿರುವುದು ಕಂಡು ಬಂತು. ಆದರೆ ಪುರುಷ ಫಲಾನುಭವಿಗಳಲ್ಲಿ ಕೂಲಿಕಾರರ ಪ್ರಮಾಣ ಕಡಿಮೆ.

ಈ ಎಲ್ಲಾ ಅಂಶಗಳಿಂದ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯು ಸದ್ಯ ಅಸ್ತಿತ್ವದಲ್ಲಿರುವ ಲಿಂಗತಾರತಮ್ಯಗಳನ್ನು ಮುಂದುವರಿಸುತ್ತಿದೆ ಎಂದು ಹೇಳಬಹುದು. ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯ ಮೂಲ ನಿಬಂಧನೆ ಪ್ರಕಾರ ಈ ಯೋಜನೆಯಡಿಯಲ್ಲಿ ಆಯ್ಕೆಯಾದ ಫಲಾನುಭವಿಗಳಲ್ಲಿ ಶೇ.೪೦ರಷ್ಟು ಮಹಿಳೆಯರು ಇರಬೇಕು ಎಂಬುದಾಗಿದೆ.ಆದರೆ ನಮ್ಮ ಅಧ್ಯಯನದ ಕ್ಷೇತ್ರವಾದ ಹಗರಿಬೊಮ್ಮನಹಳ್ಳಿ ತಾಲ್ಲೂಕಿನಲ್ಲಿ ೧೯೯೪-೯೫ರ ಸಾಲಿನಲ್ಲಿನ ಅಂಕಿ-ಅಂಶ ನೋಡಿದಾಗ ಆಯ್ಕೆಯಾದ ಫಲಾನುಭವಿಗಳಲ್ಲಿ ಶೇ.೪೦ರಷ್ಟು ಮಹಿಳೆಯರಿಲ್ಲ ಎಂಬುದು ತಿಳಿದು ಬಂದಿದೆ.

ಇಲ್ಲಿ ಅಭಿವೃದ್ಧಿ ಹಾಗೂ ಲಿಂಗ ಸಂಬಂಧ ಕುರಿತಂತೆ ಒಂದು ತಾತ್ವಿಕ ಅಂಶವನ್ನು ಪರಿಗಣಿಸುವುದು ಸೂಕ್ತ. ಅಭಿವೃದ್ಧಿ ಪ್ರಕ್ರಿಯೆಯು ಲಿಂಗ ನಿರಪೇಕ್ಷವಾಗಿರುತ್ತದೆ ಎಂದು ನಂಬಲಾಗಿದೆ. ಆದರೆ ಇತ್ತೀಚಿನ ಅನೇಕ ಅಧ್ಯಯನಗಳು ಅಭಿವೃದ್ಧಿಯ ಲಿಂಗ ನಿರಪೇಕ್ಷ ಸ್ವರೂಪವನ್ನು ತಳ್ಳಿಹಾಕಿದ್ದಾವೆ. ಅಭಿವೃದ್ಧಿ ಪ್ರಕ್ರಿಯೆಯು ಫಲಗಳನ್ನು ಲಿಂಗ ಭೇದವೆಣಿಸದೆ ಸ್ತ್ರೀಯರು ಹಾಗೂ ಪುರುಷರ ನಡುವೆ ಸಮಾನವಾಗಿ ಹರಿಸುತ್ತದೆ ಎಂಬ ಅಂಶ ಲಿಂಗ ನಿರಪೇಕ್ಷ ನಿಲುವಿನಲ್ಲಿ ಅಂತರ್ಗತವಾಗಿದೆ. ಇದು ಅಧ್ಯಯನಗಳಲ್ಲಿ ಹುಸಿಯೆಂಬುದು ಸಿದ್ಧವಾಗಿದೆ. ಆದ್ದರಿಂದ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಲಿಂಗ ಸಂಬಂಧಗಳ ಬಗ್ಗೆ ಆದ್ಯ ಗಮನ ನೀಡಬೇಕಾಗುತ್ತದೆ. ಆದರೆ ಇದು ನಡೆಯುತ್ತಿಲ್ಲ.(೩.೨.೪)

**೫.೩ ಕೆಲವು ಸೈದ್ಧಾಂತಿಕ ಪ್ರಶ್ನೆಗಳು**

ಪ್ರಸ್ತುತ ಅಧ್ಯಯನವು ಅಭಿವೃದ್ಧಿ ಕಾರ್ಯಕ್ರಮ, ಬಡತನದ ನಿವಾರಣೆ , ಬಡತನದ ರೇಖೆ ಮುಂತಾದ ತಾತ್ವಿಕ ಪರಿಕಲ್ಪನೆಗಳನ್ನು ಒಳಗೊಂಡಿದೆ. ನಮ್ಮ ಅಧ್ಯಯನದಲ್ಲಿ ಕಂಡುಕೊಂಡ ತಥ್ಯಗಳ ಆಧಾರದಿಂದ ಈ ಪರಿಭಾವನೆಗಳನ್ನು ಮರು ವ್ಯಾಖ್ಯಾನಕ್ಕೆ ಒಳಪಡಿಸಬಹುದಾಗಿದೆ.

**ಅಭಿವೃದ್ಧಿ ಕಾರ್ಯಕ್ರಮ:**

ಅಭಿವೃದ್ಧಿ ಕಾರ್ಯಕ್ರಮಗಳನಮ್ಮ ಸಮಾಜದ ಸಂದರ್ಭದಲ್ಲಿ ಸರ್ಕಾರದಿಂದ ರೂಪಿತಗೊಂಡು ತದನಂತರ ಅನುಷ್ಠಾನಗೊಳ್ಳುತ್ತವೆ. ಆದ್ದರಿಂದ ಇವನ್ನು ಮೇಲಿನಿಂದ ಕೆಳಗೆ ಹರಿಯಲ್ಪಟ್ಟ ಕಾರ್ಯಕ್ರಮ ಎಂದು ಕರೆಯಲಾಗಿದೆ. ಇದನ್ನು ನಾವು ಆಡಳಿತಾತ್ಮಕ ಅಭಿವೃದ್ಧಿ ಕಾರ್ಯಕ್ರಮವೆಂದು ಕರೆದಿದ್ದೇವೆ. ಏಕೆಂದರೆ ಈ ಕಾರ್ಯಕ್ರಮಗಳನ್ನು ರೂಪಿಸುವ , ಅನುಷ್ಠಾನಗೊಳಿಸುವ, ಉಸ್ತುವಾರಿ ನೋಡಿಕೊಳ್ಳುವ , ಮೌಲ್ಯಮಾಪನ ಮಾಡುವಜವಾಬ್ದಾರಿ ಅಧಿಕಾರಶಾಹಿಯಲ್ಲಿದೆ. ಅಂದ ಮೇಲೆ ಇದು ಜನರ-ಬಡಜನರ - ಗ್ರಾಮವಾಸಿಗಳ ಸಹಭಾಗಿತ್ವವನ್ನು ಒಳಗೊಂಡಿಲ್ಲ. ಇಲ್ಲಿ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ 'ನೀಡುವವರು' ಮತ್ತು 'ಪಡೆಯುವವರು' ಎಂಬ ಭಿನ್ನತೆ ಉಂಟಾಗಿ ಬಿಡುತ್ತದೆ.

ಈ ಕಾರಣಕ್ಕೆ ವಿನೋದ್ ವ್ಯಾಸುಲು, ಜೀನ್ ಡ್ರೀಜೆ ಮುಂತಾದವರು ಬಡತನದ ನಿವಾರಣೆ ಕಾರ್ಯಕ್ರಮಗಳನ್ನು 'ಪರಿಹಾರಾತ್ಮಕ' ಕಾರ್ಯಕ್ರಮಗಳೆಂದು ಕರೆದಿದ್ದಾರೆ.ಇಲ್ಲಿ ಔದಾರ್ಯದ ಪಾತ್ರ ಅಧಿಕವಾಗಿದೆ.ಬಡವರು ಈ ಸೌಲಭ್ಯಗಳನ್ನು ತಮ್ಮ 'ಹಕ್ಕು'ಗಳೆಂದು ಭಾವಿಸುವ ವಾತಾವರಣ ನಿರ್ಮಾಣವಾಗಿಲ್ಲ. ಬಡವರ ಸಂಘಟನೆ - ಸಂಘರ್ಷದ ಮೂಲಕ ಈ ಕಾರ್ಯಕ್ರಮಗಳು ರೂಪ ತಳೆದಿಲ್ಲ.

**೫.೪ ವರಮಾನಮುಖಿ ಬಡತನ**

ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯಡಿಯಲ್ಲಿ 'ಅಭಿವೃದ್ಧಿ'ಯನ್ನೂ ಹಾಗೂ 'ಬಡತನ'ವನ್ನೂ ವರಮಾನದ ನೆಲೆಯಲ್ಲಿ ಪರಿಭಾವಿಸಿಕೊಳ್ಳಲಾಗಿದೆ. ಈ ವರಮಾನಮುಖಿ ಅಭಿವೃದ್ಧಿ ಹಾಗೂ ವರಮಾನಮುಖಿ ಬಡತನವೆಂಬ ಪರಿಭಾವನೆಗಳು ಇಂದು ತೀವ್ರ ಟೀಕೆಗೆ -ವಿಮರ್ಶೆಗೆ ಒಳಗಾಗಿವೆ. ಅಮರ್ತ್ಯಸೆನ್ , ಮೆಹಬೂಬ್ -ಉಲ್ -ಹಕ್ , ಜೀನ್ ಡ್ರೀಜೆ ಮುಂತಾದವರು ವರಮಾನಮುಖಿ ಅಭಿವೃದ್ಧಿ ಮತ್ತು ವರಮಾನಮುಖಿ ಬಡತನಗಳೆಂಬ ಪರಿಭಾವನೆಗಳಿಗೆ ಪ್ರತಿಯಾಗಿ ಮಾನವಮುಖಿ ಅಭಿವೃದ್ಧಿ ಹಾಗೂ ಮಾನವಮುಖಿ ಬಡತನಗಳೆಂಬ ಪರಿಭಾವನೆಗಳನ್ನು ರೂಪಿಸಿದ್ದಾರೆ.

ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯಡಿಯಲ್ಲಿ ಬಡವರನ್ನು ಬಡತನದ ರೇಖೆ ಆಧಾರದ ಮೇಲೆ ಗುರುತಿಸಲಾಗುತ್ತದೆ. ಒಂದು ನಿರ್ದಿಷ್ಟ ವರಮಾನದ ಮಟ್ಟಕ್ಕಿಂತ ಕಡಿಮೆ ವರಮಾನವುಳ್ಳವರನ್ನು ಬಡವರೆಂದು ವರ್ಗೀಕರಿಸಲಾಗುತ್ತಿದೆ. ವರಮಾನದ ಪ್ರಮಾಣದಲ್ಲಿನ ಏರಿಕೆಯನ್ನೇ ಅಭಿವೃದ್ಧಿಯೆಂದೂ ವರಮಾನದಲ್ಲಿನ ಅಭಾವವನ್ನೇ ಬಡತನವೆಂದೂ ನಿರ್ವಚಿಸಲಾಗಿದೆ.

ಅಮರ್ತ್ಯಸೇನ್ , ಮೆಹಬೂಬ್ -ಉಲ್ -ಹಕ್ , ಜೀನ್ ಡ್ರೀಜೆ ಪ್ರಕಾರ ವರಮಾನವು ಅಭಿವೃದ್ಧಿ ಹಾಗೂ ಬಡತನದ ಒಂದು ಮುಖ ಮಾತ್ರವಾಗಿದೆ. ಅಭಿವೃದ್ಧಿ ಮತ್ತು ಬಡತನಗಳು ಬಹುಮುಖಿ ಪ್ರಕ್ರಿಯೆಗಳಾಗಿವೆ. ಇವೆರಡೂ ಪರಿಭಾವನೆಗಳು ಅಕ್ಷರ, ಆರೋಗ್ಯ, ಆಯಸ್ಸು , ಆಹಾರ , ಆವಾಸ ಮುಂತಾದ ಮಾನವನ ಅಂತಸ್ಥ ಗುಣಗಳಿಗೆ ಸಂಬಂಧಪಟ್ಟಿವೆ ಎಂದು ಸೆನ್ ವಾದ ಮಾಡುತ್ತಿದ್ದಾರೆ. ಸೆನ್ ಪ್ರಕಾರ ಬಡತನವೆಂಬುದು, ಹಸಿವು ಎಂಬುದ , ದಾರುಣತೆಯೆಂಬುದು 'ವರಮಾನ - ಉತ್ಪನ್ನ - ಆಹಾರ' ಮುಂತಾದವುಗಳು ಇರುವುದರ ಅಥವಾ ಇಲ್ಲದಿರುವ ಸಂಗತಿಗೆ ಸಂಬಂಧಿಸಿಲ್ಲ . ಬಡತನ- ಹಸಿವು- ದಾರುಣತೆಗಳು ' ವರಮಾನ -ಉತ್ಪನ್ನ-ಆಹಾರ' ದೊರೆಗೊಳ್ಳದಿರುವ ಸಂಗತಿಗೆ ಸಂಬಂದಿಸಿದ್ದಾವೆ.ಇವೆಲ್ಲಾ ಬಡವರಿಗೆ ,ದೊರೆಗೊಳ್ಳುವಂತೆ ಮಾಡುವ ಬಗೆ ಹೇಗೆ? 'ವರಮಾನ ,ಉತ್ಪನ್ನ -ಆಹಾರ' ಮುಂತಾದವುಗಳನ್ನು ಗಳಿಸಿಕೊಳ್ಳುವ ಸಾಮರ್ಥ್ಯ ಹಾಗೂ ಸ್ವಾತಂತ್ರ್ಯವನ್ನು ಅಮರ್ತ್ಯಸೇನ್ 'ಧಾರಣಶಕ್ತಿ' ಎಂದು ಕರೆದಿದ್ದಾರೆ.

ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯು ವರಮಾನ ಅಭಿವೃದ್ಧಿ ಕಾರ್ಯಕ್ರಮವಾಗಿದೆ. ವಾಸ್ತವವಾಗಿ ಇದನ್ನು ಮಾನವಮುಖಿ ನೆಲೆಯಲ್ಲಿ ಪರಿಗಣಿಸುವ ಅವಶ್ಯಕತೆ ಇದೆ. ಬಡತನವನ್ನು ಕೇವಲ ವರಮಾನದ ಅಭಾವದಲ್ಲಿ ಮಾತ್ರ ಕಾಣದೆ ಅಕ್ಷರ, ಆರೋಗ್ಯ,ಆಯಸ್ಸು,ಆಹಾರ ,ಆವಾಸಗಳ ಅಭಾವದಲ್ಲೂ ಕಾಣುವಂತಾಗಬೇಕು. ಬಡತನ ನಿವಾರಣೆ ಕಾರ್ಯಕ್ರಮವನ್ನು ಹೀಗೆ ಮಾನವಮುಖಿ ನೆಲೆಯಲ್ಲಿ ಅನುಷ್ಠಾನಗೊಳಿಸಬೇಕು. ಬಡತನ ನಿವಾರಣೆಯು ಅಕ್ಷರ ,ಆರೋಗ್ಯ,ಆಹಾರ, ಆವಾಸಗಳನ್ನು ಒಳಗೊಳ್ಳಬೇಕು. ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯು ಮಾನವಮುಖಿ ನೆಲೆಗಳನ್ನು ಒಳಗೊಂಡಿಲ್ಲ.

ಅಭಿವೃದ್ದಿಯು ಮಾನವಮುಖಿ ಸ್ವರೂಪ ಪಡೆದುಕೊಂಡರೆ ಹಾಗೂ ಧಾರಣಶಕ್ತಿಯನ್ನು ವರ್ಧಿಸುವ ಸ್ವರೂಪದಲ್ಲಿದ್ದರೆ ಆಗ ಬಡವರು ಅಭಿವೃದ್ದಿ ಕಾರ್ಯಕ್ರಮಗಳನ್ನು ತಮ್ಮ ಹಕ್ಕುಗಳಾಗಿ ಪರಿಗಣಿಸುತ್ತಾರೆ. ಅವರು ಕೇವಲಪಡೆಯುವವರಾಗುವುದಿಲ್ಲ. ಅವರು ಒತ್ತಾಯಿಸುವವರಾಗುತ್ತಾರೆ. ಆಗ ಆಭಿವೃದ್ದಿಯು ಬಹುಮುಖಿಯೂ, ಬಹುರೂಪಿಯೂ, ಆದ ಪ್ರಕ್ರಿಯೆಯಾಗುತ್ತದೆ.

ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯಲ್ಲಿ ಅಕ್ಷರ, ಆರೋಗ್ಯ, ಆಹಾರ ಮುಂತಾದ ಅಭಾವಗಳನ್ನು ಸೇರಿಸುವುದು ಸಾಧ್ಯವಾಗಲಿಕ್ಕಿಲ್ಲ. ಆದರೆ ಅಭಿವೃದ್ದಿ ಹಾಗೂ ಬಡತನ ನಿವಾರಣೆಯು ಅವುಗಳನ್ನು ಒಳಗೊಳ್ಳಬೇಕಾಗುತ್ತದೆ. ಇಂದು ಆಭಿವೃದ್ದಿಯನ್ನು ವರಮಾನ ಕೇಂದ್ರದಿಂದ ಮಾನವಮುಖಿ ನೆಲೆಗೆ ಪರಿವರ್ತಿಸುವ ಆಗತ್ಯವಿದೆ.ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯನ್ನೂ ಸಹ ಮಾನವಮುಖಿ ಸ್ವರೂಪಕ್ಕೆ ಪರಿವರ್ತಿಸಬೇಕಾಗಿದೆ.

ವರಮಾನಮುಖಿ ಅಭಿವೃದ್ಧಿ-ವರಮಾನಮುಖಿ ಬಡತನ ಪರಿಭಾವನೆಗಳು ಲಿಂಗ ನಿರಪೇಕ್ಷ ನಿಲುವು ತಳೆದು ಬಿಟ್ಟಿದ್ದಾವೆ. ಇವುಗಳನ್ನು ಲಿಂಗ ವಿಶಿಷ್ಟಗಳನ್ನಾಗಿ ಮಾಡಬೇಕಾದರೆ ಅವುಗಳನ್ನು ಮಾನವಮುಖಿ ಸಂಸ್ಕರಣಕ್ಕೆಒಳಪಡಿಸಬೇಕಾಗುತ್ತದೆ.

**ಉಪಸಂಹಾರ**

ಈ ಅಧ್ಯಯನವನ್ನು ನಾನು ೧೦ ತಿಂಗಳ ಎಂ.ಫಿಲ್ ಪದವಿಗಾಗಿ ಕೈಗೊಂಡಿದ್ದೇನೆ. ಸಮಯದ ಅವಕಾಶ ಕಡಿಮೆಇದ್ದುದರಿಂದ ಈ ಅಧ್ಯಯನದಲ್ಲಿ ಅಧ್ಯಯನ ವಿಷಯದ ಕೂಲಂಕುಷ ಪರಾಮರ್ಶೆಗೆ ಒತ್ತುಕೊಡುವುದಕ್ಕೆ ಪ್ರತಿಯಾಗಿ ಅಧ್ಯಯನ ವಿಧಾನಕ್ಕೆ ನೀಡಿದ್ದೇನೆ. ಅಧ್ಯಯನ ವಿಷಯ-ಮಾಹಿತಿ ಸಂಗ್ರಹಗಳಲ್ಲಿ ಕೊರತೆ ಇದ್ದಾವು.

ನಾವು ಈ ಅಧ್ಯಯನಕ್ಕೆ ಸಂಗ್ರಹಿಸಿದ ಮಾಹಿತಿಯನ್ನು ಪ್ರಾಥಮಿಕ ನೆಲೆಯಲ್ಲಿ ವಿಶ್ಲೇಷಿಸಲು ಪ್ರಯತ್ನಿಸಿದ್ದೇವೆ.ಸಾಂಖ್ಯಿಕ ಸೂತ್ರಗಳನ್ನು ಇಲ್ಲಿ ಬಳಸಿಲ್ಲ. ಈ ಅಧ್ಯಯನವು ಅಧ್ಯಯನ ವಿಷಯದ ಗುಣಾತ್ಮಕ ನೆಲೆಯ ಅನ್ವೇಷಣೆಗೆ ಹೆಚ್ಚು ಪ್ರಯತ್ನಿಸಿದೆ. ಅಭಿವೃದ್ಧಿ ಮತ್ತು ಬಡತನ ಪರಿಭಾವನೆಗಳನ್ನು ಸಧ್ಯ ಪರಿಭಾವಿಸುತ್ತಿರುವ ಸೀಮಿತ ನೆಲೆಗಳನ್ನುಗುರುತಿಸಿದ್ದೇನೆ. ಅಭಿವೃದ್ಧಿ ಹಾಗೂ ಬಡತನದ ನಿವಾರಣಾ ಕಾರ್ಯಕ್ರಮಗಳು ಮಾನವಮುಖಿ ನೆಲೆಗಳನ್ನು ಪಡೆದುಕೊಳ್ಳಬೇಕಾದ ಅಗತ್ಯಗಳನ್ನು ಗುರುತಿಸಲು ಪ್ರಯತ್ನಿಸಲಾಗಿದೆ.

## ಗ್ರಂಥ ಸೂಚಿ


ಚಂದ್ರಶೇಖರ್ , ಟಿ.ಆರ್ . (೧೯೯೩) ಅಭಿವೃದ್ಧಿ ಮಿಮಾಂಸ ಕನ್ನಡ ವಿಶ್ವವಿದ್ಯಾಲಯ, ಹಂಪಿ.

-------------- (೧೯೯೪) ಬಳ್ಳಾರಿ ಜಿಲ್ಲೆಯ ನಿಸರ್ಗಸಂಪತ್ತು ಶ್ರೀ ಸಿದ್ದವೀರ ಶಿವಾಚಾರ್ಯ ಜ್ಞಾನಪ್ರಕಾಶನ, ಪುರ.

ನಂಜುಂಡಪ್ಪ, ಡಿ.ಎಂ. (೧೯೮೬) ಗ್ರಾಮಿಣ ಅಭಿವೃದ್ಧಿಗೆ ಸಾಂಸ್ಥಿಕ ಚೌಕಟ್ಟು, ಸಹ್ಯಾದ್ರಿ, ಮೈಸೂರು.

ನಾರಪ್ಪರನವರ, ಎಸ್ .ಆರ್ . (೧೯೯೧) ಸಮಗ್ರ ಗ್ರಾಮೀಣ ಅಭಿವೃದ್ಧಿ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ರೇಣುಕಾರ್ಯ,ಸಿ.ಕೆ. (೧೯೯೫) ಅರ್ಥಶಾಸ್ತ್ರದಲ್ಲಿ ಪರಿಮಾಣಾತ್ಮಕ ವಿಧಾನಗಳು ಚೇತನ್ ಬುಕ್ ಹೌಸ್, ಮೈಸೂರು.

ಹುಲ್ಲೋಳಿ, ಎಂ.ಎಸ್ . (೧೯೯೧) ಹಳ್ಳಿಯ ಬೃಹತ್ ಯೋಜನೆ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಹೊಸಮನಿ, ಎಚ್ .ಎಸ್ . (೧೯೯೩) ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ ೧೯೯೩ ಆಕಳವಾಡಿ ಬುಕ್ ಡಿಪೊ,ಧಾರವಾಡ.

Adke,A.S.(೧೯೯೪) ***Rural Reconstruction in India*** Karnataka University, Dharwad.

Aima, Ashok & Deepak Gupta. (೧೯೯೨) ***Rural Development: Principles, Policies & Management*** Sage, London.

Azim, Saukath. (೧೯೯೫) ***Muslim Women: Emerging Identity*** Rawat, Jaipur. .

Aziz, Abdul. (೧೯೭೮) ***Trade Unions and Industrial Peace in Karnataka*** Development Studies, Mysore.

Basu,k.& P.Pattanaik, K. Suzumara (eds). (೧೯೯೫) ***Choices***, ***Welfare and Development*** Oxford, New York.

Chakravarty, Sukhamoy. (೧೯೮೭) ***Development Planning: The Indian Experience*** Oxford, Delhi.

Choundhry, Roy. & P.R.Shukla. (೧೯೯೧) **Encyclopaedia of Economic Development** Akash, New Delhi.

Collin, P.H. (೧೯೯೧) ***Dictionary of Banking and F inance*** Akash, New Delhi.

Devi, Laxmi. (೧೯೯೬) ***Encyclopaedia of Rural Development*** Anmol, New Delhi.

Dutta, Bhaskar. (et.al) (೧೯೯೩) ***Theoritical Issues in Develpment Economics*** Oxford, Bombay.

Gandhi,M.K. (೧೯೬೦) ***Bread Labour*** Navajeevan, Ahmedabad.

--------------(೧೯೬೦) ***Industries and Agrarian Life and Relations*** Navajeevan, Ahmedabad.

Heilbroner, L. Robert.(೧೯೬೮) ***The World Philosophers*** Washington, New York.

Indumati, S. (೧೯೯೧) ***International F lows of Resources and Economic Develop ment In India since ೧೯೬೯*** Prasaranga, University of Mysore.

Masood,M.S & M.Shivalingaiah. (eds) (೧೯೭೨) ***Urban Systems and Rural Develop ment*** Prasaranga, University of Mysore.

Mathur, B.L.& Bhagirath Singh. (೧೯೯೫) ***Experience of Banking in Rural Develop ment*** S.B.S.A, Jaipur.

Meti, T.K. (೧೯೬೬) ***Economy of Scarcity Areas*** Karnataka University, Dharwad.

---------- (೧೯೬೯) ***Economic Development and Social Change in Mysore State*** Karanatak University, Dharwad.

Monga,G.S. (೧೯೮೪) ***Mathematics and Statistical Economics*** Vikas, New Delhi.

Mukherjee, Amitava (ed) (೧೯೯೫) ***Participatory Rural Appraisal: Methods and Appliations in Rural Planning*** Vikas, New Delhi.

Nanjundappa, D.M. (೧೯೭೨) ***Transport Planning and Finance Karnataka*** University,Dhaward.

Panday, P.C. & R.S Jalal (೧೯೯೧) ***Rural Development in India: Issues & Policies*** Anmol, New Delhi.

Pranab, Srinivasan T.N. & K.Bardhan (eds) (೧೯೮೨) ***Rural Poverty in South Asia*** Delhi University. New Delhi.

Punit, A.E.(೧೯೮೪) ***Leadership Diminsions in Rural India*** Karnataka University,Dharwad.

Rajashekhariah, A.M.(೧೯೮೮) ***Symposium on Planned Economic Development and the Development Programmes for Weaker Section in Karnataka*** Karnataka University, Dharwad.

Rao.R.V. (೧೯೬೯) ***Gandhian Contribution to Indian Economy*** Prasaranga, University of Mysore.

Rosin, Thomas.R. (೧೯೮೭) ***Land Reform and Agrarian Change***. Rawat, Jaipur.

Seshadri,B.(೧೯೯೧) ***Industrialisation and Regional Development*** Concept, New Delhi.

Singh, Kattar.(೧೯೯೫) ***Rural Development: Principles, Policies & Management*** Sage, New Delhi.

Subbaraidu, C B. Sambasiva Rao. E.V.Narayana. (୧୯୯୧) ***Rural Development in India and Policies*** Anmol, New Delhi.

**JOURNALS:**

Aurora, G.S et.al., (୧୯୯୩)'New Economic Policy Voluntary Organisation and Rural Poor' in ***EPW*** Vol.୨୯, No.୧୪, pp. ୭୮୭-୮୮.

Dandekar, V.M. (୧୯୯୪)'Role of Economic Planning In India in the ୧୯୯୦s and Beyond' in ***EPW***, Vol.୨୯, No.୨୪, pp. ୧୪୫୭-୧୪୬୪.

Dev, Mahendra s. (୧୯୯୪)'Employment Guarantee Schemes' in ***EPW***, Vol.୩୧, No.୯,pp. ୫୬୦୭୭-୫୬୩.

Dreze, Jean.(୧୯୯୦)'Poverty in India and IRDP deldusion' in ***EPW,*** Vol.୨୫,No.୩୯, pp. A:୯୫ -୧୦୪.

Eapen, Maridua. (୧୯୯୬)'Rural- Non- Form Employment: Some Reflections on Petty Production' in ***EPW,*** Vol.୩୧ NO.୨୧,pp ୧୬୭୩-୧୬୮୧.

Galab,S. (୧୯୯୩)'Rural Employment Programmes: Case for Involving Voluntary Or ganisations' in ***EPW***, Vol.୨୮.NO.୧୧, pp. ୪୦୯-୪୧୩.

Gosh D.K. (୧୯୯୫) IRDP and Women Development: A case study in West Bengal in ***Journal of Rural Develoment (JRD)***.Vol.୧୨, No.୬, pp. ୬୫୯-୬୬୫

Kaushik ,Amarchand (୧୯୯୩) ' Income Generating effects of Rural Credit : A Case Study of IRDP Haryana,' in ***JRD.*** Vol. No.୧୨,pp ୮୯-୧୦୨

Manipal. ( ୧୯୯୬) 'Million Wells Scheme : Loss Gains'in ***EPW***, Vol.୩୧,No.୮, pp. ୪୪୭-୪୪୯.

Munde, Sudipto.(୧୯୯୩) 'Unemployment and financing of Relief employment in a Period of Stabilisation' in ***EPW,*** vol.୨୮, No.୫,pp ୫୨୬-୫୩୦.

Singh and Sadangi,B.N. (୧୯୯୩) 'Understanding Profiles of the Self employed Rural Youth for promoting Occupational Diversification', in ***JRD***. Vol.୧୨, No.୬,pp. ୫୭-୭୬.

Shah , Tushar.(୧୯୯୩) ' Agriculture & Rural Development in ୧୯୯୦'s and Beyond Redesigning Relations between State and Institutions of Development', in ***EPW***, Vol.୨୮, No.୩୯, pp. ୭୪-୮୫.

Rao,V.M.(୧୯୯୭)'IRDP and Rural Diversification',in ***EPW***, Vol,୧୫, NO.୨୪,pp ୩୦-୩୫.

Vyasalu ,Vinod. (୧୯୯୫) 'Management of Poverty Alleviation Programmes in Karnataka: an Over view', in ***EPW***,Vol.Oct. pp. ୨୬୪୬-୨୬୫୦.

